# ಆತ್ಮ ಗೀತಾಂಜಲಿ

**ಮಲ್ಲಿಕಾ**

ನ ಕರ್ತೃತ್ವಂ ನ ಕರ್ಮಾಣಿ
ಲೋಕಸ್ಯ ಸೃಜತಿ ಪ್ರಭುಃ ।
ನ ಕರ್ಮಫಲ ಸಂಯೋಗಂ
ಸ್ವಭಾವಸ್ತು ಪ್ರವರ್ತತೇ ॥

Aatma Geetanjali in Kannada by 'Mallika'
Published by Lakshmi Prakashana,
170, Langford Road, Bangalore-560 025.

ಆತ್ಮ ಗೀತಾಂಜಲಿ ಮಲ್ಲಿಕಾ ವಿರಚಿತ ಐವತ್ತೊಂದನೆಯ ಕೃತಿ
ಲಕ್ಷ್ಮೀ ಪ್ರಕಾಶನ ಮೂಲಕ ಪ್ರಕಟಿತ.

ಪ್ರಥಮ ಮುದ್ರಣ : ೧೯೯೧



ಬೆಲೆ : ಮೂವತ್ತು ರೂಪಾಯಿ

ಮುದ್ರಕರು:

ನ್ಯೂ ಐಡಿಯಾಸ್
ನಂ. 30, 15ನೇ ಮುಖ್ಯ ರಸ್ತೆ
ಮೂರನೆಯ ವಿಭಾಗ, ಜಯನಗರ
ಬೆಂಗಳೂರು–560 011

॥ ಶ್ರೀ ಕೃಷ್ಣಾರ್ಪಣಮಸ್ತು ॥

# ಆತ್ಮ ಗೀತಾಂಜಲಿ

**ಮಲ್ಲಿಕಾ**

ಲಕ್ಷ್ಮೀ ಪ್ರಕಾಶನ
170, ಲ್ಯಾಂಗ್ ಫೋರ್ಡ್ ರೋಡ್
ಬೆಂಗಳೂರು—560 025

# ನಿವೇದನೆ

ಚಿಂತನಾ ತರಂಗಗಳಲ್ಲಿ ಆಗಾಗ್ಗೆ ಉಕ್ಕಿ ಹರಿಯುವ ಭಕ್ತಿ ಭಾವನೆಗಳನ್ನು ಗೀತರೂಪದಲ್ಲಿ ಹರಿಸಿರುವುದೇ ಆತ್ಮ ಗೀತಾಂಜಲಿ. ದೇವರ ನಾಮಾವಳಿಗಳು–ಭಕ್ತಿರಸದಿಂದ ಕೂಡಿದ ಭಜನೆಗಳು. ಕುಳಿತಲ್ಲಿ ನಿಂತಲ್ಲಿ ಕೆಲಸ ಮಾಡುವಲ್ಲಿ ಗುಣುಗುಣಿಸುವಂತಹ ಗಾನ ಮುಕ್ತಕಗಳು. ಇವು ಛಂದೋಲಯ ಬದ್ಧವಾಗಿವೆ ಎನ್ನಲಾರೆ ವಚನ ಬದ್ಧ ಎನ್ನಬಹುದು. ಲಕ್ಷ್ಮೀ ಪ್ರಕಾಶನ ಮಾಲೆಯಲ್ಲಿ ಇದು ಐವತ್ತೊಂದನೆಯ ಕುಸುಮ. ಭಕ್ತಿ ಭಾವ ಉಳ್ಳವರಿಗಿದು ಮನದುಂಬಿದರೆ ನನ್ನ ಶ್ರಮ ಸಾರ್ಥಕ.

ಪ್ರಜಾಪತಿ ಸಂವತ್ಸರದ ಕಾರ್ತಿಕ ಶುಕ್ಲ ಏಕಾದಶಿ ಸೋಮವಾರ

ಮಲ್ಲಿಕಾ
೨–೧೨–೧೯೯೧

# ಏಳು ಏಳೈ....

ಏಳು ಏಳೈ ಇಂದಿರಾ ರಮಣ
ಬೆಳಗಾಯಿತು ಏಳಯ್ಯ ಶುಭಚರಣ
ಭವ ಭಯ ರೋಗ ನಿವಾರಣ
ದಿವ್ಯ ದರುಶನವ ನೀಡೈ ಶ್ರೀವರನೇ !

ಅರುಣಾರುಣನುದಿಸಿದನದೊ ಮೂಡಣದಲಿ
ಉಜ್ವಲೋಜ್ವಲ ಕಿರಣಗಳ ಸರಿಯನು ಚೆಲ್ಲಿ
ನಾರದ ವಶಿಷ್ಟರು ದರುಶನದ ಬಯಕೆಯಲಿ
ಕಾದಿಹರು ಏಳಯ್ಯ ಶ್ರೀ ಪರಾತ್ಪರನೇ ! ||ಏ||

ಲೋಕದಲಿ ಲೋಗರೆಲ್ಲ ನಿನ್ನ ಪಾದ
ಸೇವೆಗೆಂದು ಬಾಗಿಲಲಿ ನೆರೆದು ನಿಂದು
ಎದುರು ನೋಡುತಿಹರು ಆಕರದಿಂದ
ದಯಮಾಡಿ ಏಳಯ್ಯ ಪುಣ್ಯ ಪುರುಷನೇ ! ||ಏ||

ಜಗತ್ಮಂಡಲ ಚಕ್ರ ನಿನ್ನುಳಿದು
ನಡೆಯಲಹುದೇ ಶ್ರೀ ವರದಾ
ನೀನೇ ಜಗತ್ ಕಾರಕ ನೀನೆ ಬಂಧ
ವಿಮೋಚನ ಏಳಯ್ಯ ಪರಮಾತ್ಮನೇ ||ಏ||

— ೦ —

## ಅನುದಿನವು....

ಅನುದಿನವು ನಿನ್ನಯ ಸ್ಮರಣೆಯೊಂದೇ
ನಿಜ್ಜವಾಗಲೆನಗೆ ಹೇ, ಪರಮ ದಯಾಕರನೇ !

ಭಕ್ತಿ ಭಾವದಿಂದ ನಮಿಪೆ ನಿನಗೆ
ಶಂಖ ಚಕ್ರ ಗದಾ ಪದ್ಮ ಧರನೇ
ಕೌಶೇಯ ಪೀತಾಂಬರ ಧಾರಿಯೇ
ದಯೆಯಿಂದ ಪರಾಮರಿಸೆಮ ಸ್ಥಿತಿಗತಿಯ. ||ಅ||

ಭವರೋಗದ ಪಿಚಂಡಿ ಹಸ್ತದಲಿ
ಸೆರೆ ಸಿಲ್ಕಿರಲ್ ಹಿಂದು ಮುಂದೆನದೆ
ಬಗ್ಗು ಬಡಿವುದು ನೆತ್ತರನು ಹಿಂಡಿ
ನೀನೆ ಕರುಣೆದೋರು ಶ್ರೀ ಪ್ರಭುವೇ ! ||ಅ||

ಕಟ್ಟು ಕಟ್ಟಳೆಯ ಕೋಪ ತಾಪದ
ರೋಸಗೀಸಡ ಕಟ್ಟುಸಿರ್ ಕೊರಳ್
ಬಿಗಿದು ಎರವಾಗುತಿದೆ ಪ್ರಾಣಕೆ
ದೇವಾಧಿದೇವ ಬಂದೆನ್ನ ಕಾಯೈ. ||ಅ||
ಓ ಎನ್ನ ಪರಮ ಬಂಧುವೇ !

— ೦ —

# ಮಂಗಳಾತ್ಮಕ....

ಮಂಗಳಾತ್ಮಕ ಮಹಾ ಮಹಿಮಾಮಯ
ಗುರುವರ್ಯ ಪರಮ ಸದ್ಗುಣವೇತ್ತನೇ
ಮುನ್ನಡೆಸೆನ್ನಂ ಕಡು ಕತ್ತಲೆಯಿಂದೆ
ತವ ಬೆಳಕಿನ ಉಜ್ವಲೋಜ್ವಲ ನಾಡಿಗೆ.

ಅಕ್ಕರದ ಅಕ್ಕರೆಯುಮಿಲ್ಲದಿರಲೆನ್ನೊಳ್
ಸಕ್ಕದ ಸಕ್ಕರೆಯ ಸವಿ ಸವಿದೆನಿಲ್ಲ
ನಿನ್ನ ಪದಸೇವೆಯ ನಲ್ ಗೈದೆನಿಲ್ಲ
ಮೂರ್ಖಮನ ಮತಿಯಂದ ನರಳಿದೆ ಅನುದಿನ. ||ಮಂ||

ಭವ ಬೆಂಕಿಯು ಸುಡುತಿಹುದೆನ್ನನುಂ
ನರನರಗಳ್ ಸುಟ್ಟುರಿದು ಮುರುಟಿವೆ
ನಿತ್ರಾಣದಲಿ ಕುಸಿಯುತಿಹುದು ದೇಹ
ನೀನಲ್ಲದಾರು ರಕ್ಷಿಸುವರು ಶ್ರೀ ಗುರುವೇ ! ||ಮಂ||

ನಾಗೈದಪರಾಧಗಳನು ನೆರೆಮನ್ನಿಸಿ
ಕೃಪೆದೋರೈ ಸತತ ಶ್ರೀ ದೇವ ಗುರುವೇ ! ||ಮಂ||

— o —

ದೇವಿ ಸ್ತುತಿ

# ಓ ಎನ್ನ ಉದ್ ಭವಾನಿ....

ಓ ಎನ್ನ ಉದ್ ಭವಾನಿ ಭುವನೇಶ್ವರೀ ದೇವಿಯೆ,
ನಿನ್ನ ಪರಾಮರಿಕೆಗೆ ಈವೆನವ್ವಾ ಎನ್ನೆಲ್ಲ
ವೇದನಾಭರಿತ ಹೃದಯದ ದೀನ ಮೊರೆಯನು.

ಏಳೇಳು ದಶಕಗಳ ಘೋರ ರಿಣವಿಂದಿಗೆ ತೀರಿತು
ಕೂರ ಭವಧಿಯ ರಣಗೋಳಿನ ವಿಷವರ್ತುಲದಲಿ
ಹೃದಯ ಸಾಗರದ ರಸಹಿಂಗಿ ಬತ್ತಿ ಮರು ಭೂಮಿಯ್ಯೆಸಿ
ತಾಳಲಾರದೆ ಬಾಳಲಾರದೆ ಸಾಯುತಿಹೆ ಚಣ ಚಣವು. ||ಓ||

ನೀನೆನ್ನ ವರ ಜನನಿಯಾಗಿಯು ಕಾಣದೆ ನಿನ್ನನು
ಪರಿತಪಿಸುತಿಹೆ ನಿನ್ನ ಮಡಿಲಿನ ಸುಖಾಶ್ರಯವ ಬೇಡಿ.
ಕಾವರಿಲ್ಲ, ನೊಂದು ನೋವರಿಲ್ಲ. ಕರೆದು ಬಲ್ಮೆಯಿಂದ
ಆದರಿಸುವರಿಲ್ಲ ಗುಟುಕು ನೀರ ನೀವರಿಲ್ಲ ತಾಯೆ ! ||ಓ||

ಮೃತ್ಯುವಶವಾಗುವ ಮುನ್ನ ಕಿಂಚಿತ್ ಪದ ಸೇವೆಯ
ನೀಡಿ ಪರಮುದಯೆಯಿಂದ ಮುಕ್ತಿಯ ನೀಡು ತಾಯೆ ! ||ಓ||

— ೦ —

## ತಾಯೆ ಜಗಜ್ಜನನಿ....

ತಾಯೆ, ಜಗಜ್ಜನನಿ ಪರಮ ಸೃಷ್ಟಿಮಾತೆ.
ನಿತ್ಯ ನೂತನ ಮೂರ್ತೆ ಅಸಂಖ್ಯ ಪ್ರಸೂತೆ
ನಮೋ ಪರಮ ಇಂದ್ರಜಾಲ ಕಾರಿಣಿ !

ಅಖಿಲ ಹೃದಯ ಪದ್ಮೆ ವಿಶ್ವದೇಕ ಸದ್ಮೆ
ನಿತ್ಯ ಸತ್ಯ ಶ್ರೇಯಸಿ ಜಗತ್ ಪ್ರೇಯಸಿ
ನಮೋ ಸರ್ವ ವಿದ್ಯಾ ಪ್ರದಾಯಕಿ ! ||ತಾ||

ದಿವ್ಯ ಸಾಹಿತ್ಯ ಸಂಗೀತ ಅನುರಾಗಿಣಿ
ಕಾವ್ಯಗಳಲಿ ಪ್ರತಿಭಾ ತತ್ತ್ವಗಳಲಿ ಚಿಂತನಾ
ನಮೋ ಸಕಲ ಕಲಾನ್ವಿತ ಯೋಗಿನಿ ! ||ತಾ||

ಶಾಶ್ವತ ಕಾವ್ಯ ಕಾಮಿನಿ ಚೇತನದ ಚಿರನಿಧಿ
ಅಕ್ಷಯ ಜ್ಞಾನಪಾತ್ರೆಯಲಿ ಕುದಿದೆದ್ದ ಭಾಮಿನಿ
ನಮೋ ಹೇ ಕಠೋರ ಕಮನೀಯ ರಾಗಿಣಿ ! ||ತಾ||

— ೦ —

## ಭುವನೇಶ್ವರೀ ತಾಯೆ....

ಭುವನೇಶ್ವರೀ ತಾಯೆ, ಭಕ್ತಜನ ವಂದಿತೇ,
ತ್ರೀಲೋಕ ಕಲ್ಯಾಣಿ ನಿನ್ನಾಶ್ರಯವಿಲ್ಲದೆ
ನಡೆವುದೇ ಜಗತ್ ಚಕ್ರ ಪೇಳಮ್ಮ ಮಾತಾಯಿ
ಭುವನೇಶ್ವರೀ ನಿನಗಿದೋ ವಿನಮ್ರ ನಮನ!

ಜನನೀ ಜಗದಂಬೆ ಸಾಮವೇದ ನಮೋ ಎನೆ
ದಿವ್ಯಶಕ್ತಿ ಆನಂದದಿಂದ ತಣಿದು ನಲಿವುದು
ಭರತಶಾಸ್ತ್ರ ನಮೋ ಎನೆ ಗಲ್ಲನಡಿ ಇಡುವುದು
ಭುವನೇಶ್ವರೀ ನಿನಗಿದೋ ವಿನಮ್ರ ನಮನ ! ||ಭು||

ಲೋಕದೊಳ್ ಚೈತ್ರ ವೈಶಾಖ ಪ್ರಭುತ್ವ
ರಾಜ್ಯಭಾರ ವಹಿಸಿರೆ ಸರಾಗ ಭೋಗದಲಿ
ಧ್ಯಾನಶೀಲ ಪ್ರಣವ ಮಂತ್ರ ನಮೋ ಎನುವುದು
ಭುವನೇಶ್ವರೀ ನಿನಗಿದೋ ವಿನಮ್ರ ನಮನ ! ||ಭು||

ಬಾಳಬನ್ನ ಬಿಗಿದಿರೆ ಕೊರಳೊತ್ತಿ ಪ್ರತಿದಿನ
ಮುಂಗಾಣದೆ ತೊಳಲಿ ಬಳಲುವುದು ಜನಗಣ
ಯೋಗಶೀಲ ವೇದಶಾಸ್ತ್ರ ನಮೋ ಎನೆ ಮನ ಪುಟವುದು
ಭುವನೇಶ್ವರೀ ನಿನಗಿದೋ ವಿನಮ್ರ ನಮನ! ||ಭು||

— ೦ —

# ದೇವಿ ದುರ್ಗೆ....

ದೇವಿ ದುರ್ಗೆ, ನೆರೆ ನಂಬಿದೆನು
ನಿನ್ನ ಪಾದಾರವಿಂದಗಳನು
ನೀನೆ ಕರುಣೆಯಿಂದ ಹರಸೆನ್ನನು
ಪಾಹಿಮಾಂ ಪರಿ ಪಾಹಿಮಾಂ.

ಕಂಡವರ ಸೊತ್ತಾಗಿ ತೊತ್ತಾಗಿ
ಜೀವ ಸೋತು ಸೊಗಡು ಸೊಪ್ಪಾಗಿ
ನೊಂದಿಹೆನು ಕಹಿಯುಂಡು ಬೇವಾಗಿ
ಪಾಹಿಮಾಂ ಪರಿಪಾಹಿಮಾಂ. ||ದೇ||

ತಾಯೆ, ನಿನ್ನಕ್ಕರೆಯ ಅಭಯದಾನ
ಇಲ್ಲದಿರೆ ಭವದಿಯಲಿ ಬದುಕಿ ಬಾಳಿ
ಬೆಳೆವುದೆಂತೆನ್ನಯ ಪರಮ ಜ್ಞಾನ
ಪಾಹಿಮಾಂ ಪರಿಪಾಹಿಮಾಂ. ||ದೇ||

ಬಾಳಿನ ಜಂಜಡದಲಿ ನಿನ್ನ ನೆನೆಯೆ
ಕಾಣದಾದೆನಿನಿತು ಸುಶಾಂತ ಸಮಯ
ನೀನೆ ಬಂದೆನ್ನ ಸಲಹು ಮಮ ಜನನಿ
ಪಾಹಿಮಾಂ ಪರಿಪಾಹಿಮಾಂ. ||ದೇ||

— ೦ —

# ಹೇ ತಾಯೇ....

ಹೇ ತಾಯೇ, ಭುವನ ಮಂಡಲೇ
ವಿರಾಟ್ ವಿಶ್ವ ಸಂಚಾಲಿನೀ
ನೀನೆ ಗಗನ ನೀನೆ ದಿವ್ಯ ಧರಣಿ
ನೀನೆ ದಾತೆ ನೀನೆ ಜಗನ್ಮಾತೆ
ಹೇ ತ್ರಿಭುವನ ಮೋಹಿನಿ !

ನಿನ್ನ ನಯನದಾಳದಲ್ಲಿ ಜಡಿ
ಸಿಡಿದ ಸಿಡಿಲ ಉಜ್ಜ್ವಲೋಜ್ವಲ ಕಿಡಿ
ಪ್ರಪ್ರಥಮ ಭಾಷೆಯೊಗೆದ ಮುನ್ನುಡಿ
ಸಕ್ಕದ ಸಿರಿ ಸಕ್ಕರೆಗಿಂತ ಸಿಹಿ
ಹೇ ಸುರಚಿರ ತರುಣಿಯೇ ! ||ಹೇ||

ಭೀಷ್ಮಚರಣ ಭಂಗಿಯ ವಿನ್ಯಾಸ
ಜನನ ಮರಣ ಕಾಲದೇಶ ನ್ಯಾಸ
ಸೃಷ್ಟಿಯಲ್ಲಿ ಛಂದಲಯ ವಿಶೇಷ
ಲೋಕದೊಳವು ಅಭಂಗ ನಿವಾಸ
ಹೇ ತ್ರಿಲೋಕ ಪೂಜಿತೇ ! ||ಹೇ||

ವಿರಾಟ್ ಬ್ರಹ್ಮಾಂಡ ರೀತಿನೀತಿ
ನಿನ್ನ ನಿಯಮಿತ ಗುಣಗಣಭಾತಿ
ಅಮಿತ ಉತ್ಸಾಹ ಪ್ರದಾಯಿನಿ
ನೀನೆ ಸಾಕ್ಷಾತ್ ವಿಶ್ವ ಕುಟುಂಬಿನಿ
ಹೇ ನಿತ್ಯ ಪ್ರಗತಿ ಶೀಲೆ ! ||ಹೇ||

— o —

## ಜಗಜ್ಜನನೀ....

ಜಗಜ್ಜನನೀ, ನಿನ್ನ ಧ್ಯಾನಿಸಿ ಸ್ಮರಿಸಿ
ಬೇಡುತಿಹೆ ಸೆರಗೊಡ್ಡಿ ಭಕ್ತಿಯಿಂದ ಸದಾ.

ಬನ್ನದರಾಶಿಯುಲಾನು ಹೊರಳಾಡಿ
ನರಳುವಂದು ಕಣ್ಣಿದ್ದ ಕುರುಡ ಗಣ್ಯರು
ತಳ್ಳಿದರು ಇನ್ನಿನಿತು ಕತ್ತಲೆ ಗವಿಗೆ
ನೀನೇ ಕರುಣೆಯಿಂದ ಸಂರಕ್ಷಿಸು ಜನನೀ ! ||ಜ||

ನೀನಿರಲು ಎನ್ನ ಬಾಳಿನ ಗವಿಗೆ
ಚೆಂಬೆಳಕಿನ ಕಿಡಿಯಾಗಿ, ರಣ ಗೋಳಿನ
ಕಣಜಕೆ ಶಾಂತಿಯ ಖನಿಯಾಗಿ ಇನ್ನೇನ
ಬೇಡಲಿ ? ನೀನೇ ಕರುಣೆದೋರು ಶ್ರೀ ಜನನೀ ! ||ಜ||

ಹಾಡಿಪಾಡುವೆನೆನೆ ಸಂಗೀತ ಸಾಹಿತ್ಯದ
ಜ್ಞಾನರಸವಿನಿತಿಲ್ಲ, ಅಕ್ಕರದ ಸಕ್ಕರೆ
ಸವಿಯ ಕಂಡೆನಿಲ್ಲ, ಇನ್ನೆಂತು ಭಜಿಸಲಿ
ನಿನ್ನ ? ನೀನೇ ದಯದೋರು ಜಗಜ್ಜನನೀ ! ||ಜ||

— o —

## ಸುಪ್ತ ಕಿರು ಮನದ....

ಸುಪ್ತ ಕಿರುಮನದ ಬಡ ಭಾವನೆ
ಘನಿಸಿರುತಿರೆ ನೀನ್ನೈದೆ ಹರಸಲೆನ್ನ
ಹೀನ-ಘನಗಳ ಲೆಕ್ಕಿಸದೆ ಅನುದಿನ
ಪಾಹಿಮಾಂ ಪಾಹಿಮಾಂ ಶ್ರೀ ಜನನೀ !

ತವಪಾದ ಪದುಮಗಳಿಗೆ ಸರ್ವ
ಸಮರ್ಪಣೆ ಮಾಡಿ ಕಳೆದು ಗರ್ವ
ರಾಶಿಯ ನಿತ್ಯ ಸಲಹಿದ ಕರ್ತೆ
ಪಾಹಿಮಾಂ ಪಾಹಿಮಾಂ ಶ್ರೀ ಜನನೀ ! ||ಸು||

ಸಕಲ ದುರಿತ ಕೋಟಿಯ ಕಳೆದು
ಉದ್ಧರಿಸುತೆನ್ನಯ ಜಡ ಬದುಕನು
ಉಜ್ವಲಿಸಿ ತೊಳಗಿ ಬೆಳಗುವ ತೆರದಿ
ಪಾಹಿಮಾಂ ಪಾಹಿಮಾಂ ಶ್ರೀ ಜನನೀ ! ||ಸು||

ಶತ ಸಹಸ್ರ ರಾಗಭಾವಗಳ ಮೋದಿನಿ
ಕಾಲ ದೇಶಗಳಲಿ ನಿತ್ಯವಿನೂತನೆ
ಹರ್ಷಶೋಕ ಲೀಲೆ ಜನನಮರಣಲೋಲೆ
ಪಾಹಿಮಾಂ ಪಾಹಿಮಾಂ ಶ್ರೀ ಜನನೀ ! ||ಸು||

— ೦ —

# ಎನಿತೆನಿತು....

ಎನಿತೆನಿತು ದಿನಮಾನ ಎದುರು ನೋಡಲಿ ನಿನ್ನ
ಪ್ರಿಯ ಜನನೀ ಹೃದ್ಗುಡಿಯ ಬಾಗಿಲನು ತೆರೆದು.

ನಿನ್ನ ಧ್ಯಾನದೈಸಿರಿಯಲಿ ಭಾವನೆಗಳು ಕುದಿಕುದಿದು
ಭುಗಿಲೆದ್ದು ಜಳಜಳಿಸಿ ಹರಿವುದು ಧೀರ ರಸವಾಗಿ. ||ಎ||

ನಿನ್ನ ಪ್ರಶಾಂತ ವದನಾರವಿಂದದೊಳೆಸೆವ ಕಂಗಳ ಮಿಂಚು
ನೋಡುತಿದೆಯೆನ್ನ ಭವಸಾಗರದ ಭಂಗಬನ್ನಗಳ ಚಿತ್ರವನ್ನ. ||ಎ||

ನಿನ್ನೊಡಲಿನ ಬ್ರಹ್ಮಾನಂದರಸವಾಹಿ ಹರಿಹರಿಯೆ ಜಗಕೆ
ಜ್ಞಾನವಿಜ್ಞಾನಗಳ ದಿವ್ಯ ಭೀಮ ಭೀಷ್ಮತೆಯ ಬಹುಮಾನ. ||ಎ||

ತಾಯೆ, ಪಗಲಿರುಳ್ ಆರಾಧಿಸುವೆ ತವಪದಯುಗ್ಮಗಳ
ಧೂಳಿಯಲಿ ಹೊರಳಿ ಹುಡಿಯಾಗಿ ಮುಕ್ತಿಯನು ಪಡೆವನ್ನ
ತಾಯೆ, ಪಾಹಿಮಾಂ ಪರಿ ಪಾಹಿಮಾಂ. ||ಎ||

— ೦ —

## ಆವಜನುಮದ....

ಆವಜನುಮದ ಅಹೋಭಾಗ್ಯವೋ ತಾಯೆ,
ನಿನ್ನ ಪರಮದಯೆ ಘನಿಸಿ ಎನ್ನಮತಿಯು
ತೊಳಗಿ ಬೆಳಗಲೆಮ್ಮ ಸುಜ್ಞಾನ ದೀಪ್ತಿಯು
ದಿವ್ಯಜನನೀ ನಮಿಸುವೆ ತವ ಪದಾಂಬೋಜಕೆ !

ದೂರದೂರ ಪಥವನು ಪಿಡಿದಿರಲಾನು
ನೀನಲ್ಲದಾರು ಮುನ್ನಡೆಸುವರೆನ್ನ ಜನನಿ ?
ನೀನೇ ನಡೆಸು ಸುದೂರ ವಿಶ್ವವೀಥಿಗೆ
ದಿವ್ಯ ಜನನೀ ನಮಿಸುವೆ ತವ ಪದಾಂಬೋಜಕೆ ! ||ಆ||

ಎಡೆವಿಡದೆನ್ನನು ಮುನ್ನಡೆಸುತಿಹ
ಶಕ್ತಿಶಾಲಿನಿಯೇ, ವಿಶ್ವಮೋಹಿನಿಯೇ !
ಭಯ ಭಕ್ತಿಯಲಿ ಸಲಿಸುವೆನೆನ್ನ ಚಿರಋಣವ
ದಿವ್ಯಜನನೀ ನಮಿಸುವೆ ತವ ಪದಾಂಬೋಜಕೆ ! ||ಆ||

ವಿಶ್ವದನಂತ ಯಾತ್ರೆಯಲಿ ಸರಸಗಾಮಿನಿ
ನೀನಡೆವೆ ಮುಂದೆ ಮುಂದೆ ಭೀಷ್ಮಚರಣ
ಭಂಗಿಯಿಂದೆ, ನಾನು ನಡೆವೆ ಹಿಂದೆ ಹಿಂದೆ
ನಡೆವೆಣದ ಪಾಂಗಿನಿಂ, ಕರುಣೆ ದೋರ್
ದಿವ್ಯ ಜನನೀ ನಮಿಸುವೆ ತವ ಪದಾಂಬೋಜಕೆ ! ||ಆ||

— ೦ —

## ಶ್ರೀಮಾತೆಯೆ....

ಶ್ರೀಮಾತೆಯೆ ನಿನ್ನಡಿದಾವರೆಗಳಲಿ
ನಾಗೈದ ಪಾಪಪುಣ್ಯಗಳನೆಲ್ಲ
ಒತ್ತೆಯೀವೆನು ನೀಂ ಕರುಣೆಯಿಂದ
ಪರಾಮರಿಸಿ ಸನ್ಮಾರ್ಗವ ತೋರು
ಕಾಲ್ವಿಡಿದು ಕಣ್‌ಮುಗಿದು ಬೇಡುವೆನು.

ನೀನಿರುತಿರೆ ಹೃದಯ ದೇಗುಲದ
ಸ್ಥಾನದಲಿ ಮತ್ತೇನ ಬೇಡುವೆನು
ನಾನಿನ್ನ? ಸೊನ್ನೆತಲದಲಿ ಧೂಳಿ
ಕಣವಾಗಿ ಪುಟ್ಟಿ ಉನ್ಮತ್ತತೆಯಲಿ
ನಾನೆ ಉರಿದು ಮಾಡುತಿಹೆ ದೀಪಾವಳಿ. ||ಶ್ರೀ||

ಮಾತೆ ನೀನಿರದಿರೆ ಬದುಕಲುಂಟೇ
ಈ ಬಡ ಜೀವ? ಎನ್ನಯ ಒಡಲಿನಲಿ
ಇಹುದೊಂದೆ ಶೋಕರಸ ಹೇ ದೇವಿ,
ಅದನಲ್ಲದೇನ ನಿನಗೀವೆ ಪೇಳ್,
ನೀಂ ತಳ್ಳದಿರ್ ಎನ್ನಯ ಕಾಣಿಕೆಯ. ||ಶ್ರೀ||

— ೦ —

## ನಾ ನಿನ್ನ ಧ್ಯಾನಿಸಿ....

ನಾನಿನ್ನ ಧ್ಯಾನಿಸಿ ಪೂಜಿಸಿ
ನುತಿಸಿ ನಮಿಸಿ ಪಾಡಲು ಬಯಸುತಿರಲು
ನೀ ಕಾಣಿಸದಿಹೆ ತಿರೆಯೊಳೆಲ್ಲೆಲ್ಲು
ನಿನ್ನರಿಯದೆ ಆನೆಂತು ಪೂಜಿಸುವೆನಮ್ಮ.

ಹಾತೊರೆವುದು ಜೀವ ನಿನ್ನಯ
ಇರುವರಿಯಲು. ಕೆಲರೆಂದರು ನಿನ್ನಿರುವು
ವನದೊಳೆಂದು, ಪುಡುಪುಡುಕಿದೆ
ನಾನಂದು ವನಾಂತರದಲಿ ಜನನೀ. ||ನಾ||

ಮೋಹಿನೀಸ್ವರೂಪಿಯಾಗಿ ದಯಾರ್ದ್ರ
ಹೃದಯಿಯಾಗಿ ಪ್ರಸನ್ನ ಚಿತ್ತಳಾಗಿ
ನೀನಿಹೆ ಎಂಬರು ನಿನ್ನನಾನರಿಯದೆಯೆ
ಧ್ಯಾನಿಸುವೆನೆಂತು ಹೇ ಶ್ರೀ ಜನನೀ ! ||ನಾ||

ನೀಂ ಕರುಣೆಯಿಂ ಮೈದೋರೆನಗೆ
ಪರಮ ಜನನಿ ಕೈಮುಗಿದು ಕಾಲ್ವಿಡಿದು
ಭಕ್ತಿ ಭಾವದಿಂದಲಿ ನೆರೆ ನಿನ್ನನು
ಬೇಡುವೆನಮ್ಮ ತ್ರಿಲೋಕ ಮಾತೆಯೆ ! ||ನಾ||

—o—

# ನೀನಿನ್ನೆ ಬರಮೆನ್ನೆ....

ನೀನಿನ್ನೆ ಬರಮೆನ್ನ ಚಂದದಿಂ
ಬೆಂಬಲಿಸಿ ಕರುಣೆಯಿಂ ಕಾಯ್ದೆ ತಾಯೆ !
ಅದನರಿಯದಾನು ಮರೆತೆ ನಿನ್ನಂ
ಹೇ ಜಗಜ್ಜನನಿ ಪರಿಪಾಹಿಮಾಂ.

ಭವ ಕೂರಗತಿಯಿಟ್ಟ ಸುಡುಬೆಂಕಿಯ
ಕಟ್ಟುರಿಯುಲಿ ಸುಟ್ಟುರಿದು ಸಯ್ತಿ ನಾಂ
ಅಂದು ದುಃಖಸಂಕಟದ ಸಮಾಧಿಗೆ
ಹೇ ಜಗಜ್ಜನನಿ ಪರಿಪಾಹಿಮಾಂ. ||ನೀ||

ಬಾಳಿಗೆ ಬೆಳಕಿಲ್ಲದೆಲ್ಲ ಕಾಲವ
ನುಂಗಿ ಜೀರ್ಣಿಸಿಕೊಳ್ಳದಾನಿರಲ್
ಮತಿಗೆಟ್ಟು ನಿನ್ನ ಸೊಲ್ಲು ಕೇಳದಾದೆ
ಹೇ ಜಗಜ್ಜನನಿ ಪರಿಪಾಹಿಮಾಂ. ||ನೀ||

ಅಂದು ನರಕಕುಂಡದಲಿ ಮುಳುಗಿದ್ದು
ಕೇಳದಿರ್ದ ತವಪಾದ ಸಪ್ಪಳವು
ಇಂದು ಕೇಳ್ವುದೆನ್ನ ಕಿವಿಗಳಿಗೆ
ಹೇ ಜಗಜ್ಜನನಿ ಪರಿಪಾಹಿಮಾಂ. ||ನೀ||

— ೦ —

# ಹೇಮಾತ ತ್ರಿಭುವನ

ಹೇ ಮಾತೆ ತ್ರಿಭುವನ ಮೋಹಿನೀ
ಲೋಕತಂತ್ರ ವಿಜ್ಞಾನ ಮಾಲಿನಿ
ನೀನೇ ಜಗತ್ ನೀತಿನಿಯಮ ಲೋಲೆ
ದಿವ್ಯಪರಾಶಕ್ತಿ ಪರಂಜ್ಯೋತಿ !

ನೀನೆ ಪಂಚಭೂತಗಳ ನಿಯಂತ್ರಿಣಿ
ವಾಂಙ್ಮಯಿ ಸಚ್ಚಿದಾನಂದ ಮೋದಿನಿ
ಜ್ಞಾನಪರಿಜ್ಞಾನ ಪ್ರಮೋದಿನಿ ಸದಯಿ
ದಿವ್ಯ ಪರಾಶಕ್ತಿ ಪರಂಜ್ಯೋತಿ ! ||ಹೇ||

ಜಗತ್ತಾರೆಗಳ ಸರಮಾಲೆ ಸೂಡಿ
ಜಗಜಗಿಪೆ ರಾತ್ರಿರಾಣಿ ಸೌಧಾಮಿನಿ
ವಿಶ್ವ ಬ್ರಹ್ಮಾಂಡ ದೇಹಿನಿ ಜನನಿ
ದಿವ್ಯ ಪರಾಶಕ್ತಿ ಪರಂಜ್ಯೋತಿ ! ||ಹೇ||

ನಿತ್ಯ ಕರ್ಮಕುಶಲ ಕಲೆಯ ಲೀಲೆ
ವಿಧಿಗೆ ನೀನೆ ಬಿತ್ತು ನೀನೆ ಸವಾಲು
ನೀನೆ ಮುಕ್ತಿಶೀಲೆ ಜಗತ್ ರಾಗಿಣಿ
ದಿವ್ಯ ಪರಾಶಕ್ತಿ ಪರಂಜ್ಯೋತಿ ! ||ಹೇ||

— ೦ —

# ಜನನೀ ನಿನ್ನ....

ಜನನೀ ನಿನ್ನ ಪೂಜಿಸಲೆನಗೆ ದಿವಿನಾದ ಆಸೆ
ಆದರೆನ್ನೊಳಿಲ್ಲ ನಿನಗೊಪ್ಪಿಸುವ ಪೂಜಾದ್ರವ್ಯಗಳ್

ನಿನ್ನ ಧ್ಯಾನಿಸುವ ಮಹದಾಸೆ ಎನ್ನಯ ಮನದಲಿ
ಆದರಾನರಿಯೆ ನಿನ್ನ ವರ ನಾಮಾವಳಿಯನು ದೇವಿ ! ||ಜ||

ನಿನ್ನ ನೆನೆಯುವ ಪರಮ ಆಸೆ ಮನಮತಿಗಳಲಿ
ಇರಲೇನು ? ನೀನೆಂತಿರುವೆಯೋ ತಿಳಿಯದೆ ನೆನೆವೆನೆಂತು ? ||ಜ||

ದಿವ್ಯದರುಶನವ ಬಯಸುವೆನು ನಿನ್ನ ನೆರೆನಂಬಿ
ನೀನೆನಗೆ ಸರಿದಾರಿಯನು ತೋರು ಬಾ ಜಗಜ್ಜನನಿ ! ||ಜ||

ಶೂನ್ಯದಿಂದ ಜಗತ್ ಸೃಷ್ಟಿಗೈದು ಕಾಲಪಾಶದಿಂದೆ
ಬಿಗಿದು ಕಟ್ಟಿ ಜಗವನಾಳ್ದಪೆ ಸತ್ಯಶೋಭೆಯಿಂದೆ
ನಮೋ ನಮೋ ದಿವ್ಯಪರಾಶಕ್ತಿ !

— ೦ —

# ಎನ್ನ ಹೃದಯ

ಎನ್ನ ಹೃದಯ ಸದನದ ಭಾಮಿನಿ
ಕಮನೀಯ ಕಾವ್ಯಾನಂದ ಕಾಮಿನಿ
ದಿವ್ಯಜ್ಞಾನ ದಾಯಿನಿ ಸರಸ್ವತೀ !

ನಿನ್ನ ಬೇಡಿಕೊಂಬುವೆ ಮಾತೃಮಯಿ
ದೇವಿ ಅಜನರಾಣಿ ಪರಮ ಸದಯಿ
ಭಾವನಾ ಭಾಮಿನಿ ಕರುಣಾಮಯೀ ! ||೨||

ನೀನೆ ಧಾತೃ ನೀನೇ ರಕ್ಷೆಜ್ಞಾನಕೆ
ತಾಯೆ ಲೋಕಮಾತೆ ಶ್ರೀ ಶಾರದೇ
ನಮಿಸುವೆನು ನಿನಗೆ ಹೇ ವರತಾಯೆ ! ||೨||

ಲೋಕದೊಳ್ ನಿನ್ನನುಗ್ರಹವಿನಿತು
ಇಲ್ಲದೆ ಬೆಳಗುವುದೆ ಬಾಳ್ ಪೇಳ್,
ನೀನೇ ಮುನ್ನಡೆಸಮ್ಮ ಶಾರದಾಂಬೆ ! ||೨||

— o —

# ಜನನೀ ಶಾರದೆ....

ಜನನೀ, ಶಾರದೇ ! ನಿನ್ನ ಪೂಜಿಸಲೆಂದು
ಭಕ್ತಿಭಾವದಿಂದ ಅರ್ಪಿಸುವೆನೆನ್ನಯ
ಹೃದಯ ಕಮಲವಂ ತವ ಪಾದಪದ್ಮಗಳಿಗೆ !

ನಿನ್ನ ದಿವ್ಯ ನಾಮಾವಳಿಯನರಿಯದಾನು
ಧ್ಯಾನಿಸುವೆನೆನ್ನ ಮುದ್ದು ಮಾತೃಕೆಯ
ನೇಮದಲಿ ಶ್ರೀ ವಿದ್ಯಾಧಿದೇವತೆಯೇ ! ||ಜ||

ನಿನ್ನ ಮನತುಂಬಿ ಸ್ತುತಿಸಲರಿಯದೆ
ಮತ್ತೆ ಹೃದಯತುಂಬಿ ಭಾವಿಸಲರಿಯದೆ
ಬೇಡುವೆ ನಮ್ಮ ಅನುಗ್ರಹಿಸು ಅಜಜಾಯೆ ! ||ಜ||

ಅಕ್ಷರೆ ಅರೂಪೆ ಅಖಿಲ ವಿದ್ಯಾಪ್ರದಾಯಿನಿ
ಬಲುಭಯಭಕ್ತಿಯಿಂದ ಬೇಡುವೆನಮ್ಮ ನಿನ್ನ
ಅನುರಾಗದಿಂದಲಿ ಅನುಗ್ರಹಿಸು ಅನಕ್ಷರೆಯನು ! ||ಜ||

— o —

(ನಾದ ಬಿಂದುವಿನಿಂದ)

## ನಿನ್ನಡಿದಾವರೆಯು....

ನಿನ್ನಡಿದಾವರೆಯ ರೇಣು ತಳದಲಿ
ಮಧುವನರಸುವ ಮರಿದುಂಬಿಯು ನಾನು
ಹೇ ಮಮ ತಾಯೆ, ಅಜಜಾಯೆ !

ಕ್ಷಾಮಸುಧೆಯ ಕತ್ತಲೆ ವೀಡಿನಲಿ ತಡುಕಿ
ಬೀಳುತೇಳುತಿರಲ್ ನಾನನ್ಯೆಯೊಲ್
ನಡೆದೆ ಕಡು ಸಂಕಟದ ಸುಯ್ಲು ಹರಿಸಿ
ನಿನ್ನಡಿಯ ಜಾಡು ಹಿಡಿದು ಹೇ ತಾಯೆ ! ||೨||

ಇನ್ನೆಬರಂ ನಿನ್ನನರಸುತ ತೊಳಲಿ
ಬಳಲಿದೆನಗೆ ದಯೆದೋರೌ ಕೃಪಾಂಗಿ
ಬಾಳಟವಿಯ ದುರ್ದರ್ಶವಾದೀ ದಟ್ಟ
ಕತ್ತಲೆಯ ತೆರೆ ಹರಿದು ಮುನ್ನಡೆಯಿಸು
ನಿನ್ನಯ ಚರಣದಾಸರ ದಾಸಿಯಂ
ಹೇ ಮಮತಾಯೇ ಅಜಜಾಯೆ ! ||೩||

— ೦ —

ದೇಶಭಕ್ತಿ ಗೀತೆ

# ಜಯ ಜಯ....

ಜಯ ಜಯ ಜಯಯೇ ಭಾರತ ಜನನೀ
ವಿಶ್ವಮಾತೆಯೆ ಹೃದಯ ಜಾತೇ
ಜಯ ಜಯ ಜಯ ಜಯಹೇ

ದೀನದಲಿತರ ಮಾತೆ ಮಂಗಳ ಪ್ರೀತೇ
ದಿವ್ಯಸಂಸ್ಕೃತಿ ಪೂತೆ ವರ ಅಭಯದಾತೇ ! ||ಜ||

ವಿಧ ವಿಧ ಧರ್ಮಗಳ ಸುಸಂಪೋಷಿಣೀ
ಮುನಿ ಋಷಿಗಳ ಭಕ್ತರಸ ಮೋದಿನೀ ! ||ಜ||

ಸಸ್ಯ ಶ್ಯಾಮಲೇ ಪುಷ್ಪರಾಗ ಮೋಹಿನೀ
ಭವ್ಯ ಬಂಧುರ ಕಲಾಕಲೆಗಳ ಮಾನಿನೀ ! ||ಜ||

ತಾಯೇ ಶ್ರೀ ಜನನೀ ತ್ರಿಲೋಕ ವಂದಿತೇ
ಭಕ್ತಜನಕೋಟಿಯ ಸಂಸ್ಕಾರ ವಿಧಾತೇ ! ||ಜ||

ವೇದ ವೇದಾಂಗ ಪರಿಮಳ ವಿಖ್ಯಾತೇ
ಕಬ್ಬಿಗರ ಹಾಡಿನ ಸುಮಧುರ ಸಂಗೀತೇ ! ||ಜ||

— ೦ —

## ಲೋಕದ....

ಲೋಕದ ಲೌಕಿಕರ ದಿವ್ಯ ಜನನಿ ಭಾರತಿ
ಪರಮ ಪವಿತ್ರ ಪುಣ್ಯಭೂಮಿ ಭಾರತಿ !

ಗಿರಿವನ ನದಿಗಳ ಮಂಗಳ ಮಾಲಿನಿ
ಸುಮಸುಂದರ ಪರ್ಣಾರ್ಣವ ಶೋಭಿನಿ
ಮುನಿ ಪುಂಗವರ ವೇದಾಂತ ಪ್ರಮೋದಿನಿ ! ||ಲೋ||

ರಾಮಕೃಷ್ಣ ವಿವೇಕರ ಪ್ರೇಮ ಜನನಿ
ಶಂಕರ ಚೈತನ್ಯ ರಾಮಾನುಜರ ಜ್ಞಾನವಾಹಿನಿ
ಬಸವೇಶ್ವರ ವಿದ್ಯಾರಣ್ಯರ ಪೂಜ್ಯ ಧಾರಿಣಿ ! ||ಲೋ||

ಗಾಂಧಿಮಹಾತ್ಮ ಟಾಗೋರರ ಧರ್ಮಶಾಲಿನಿ
ವಿವಿಧ ಭಾಷೆಗಳ ವಿವಿಧ ಸಂಸ್ಕೃತಿಗಳ
ಧರ್ಮ ನೀತಿಗಳ ಕೋದ ಯಶೋಭಾರತಿ
ಪರಮ ಪವಿತ್ರ ಪುಣ್ಯಭೂಮಿ ಭಾರತಿ ! ||ಲೋ||

— o —

# ಹಚ್ಚುವೆನು....

ಹಚ್ಚುವೆನು ಕನ್ನಡದ ದೀಪಗಳ
ಕನ್ನಡಿಗರ ಹೃನ್ಮನಗಳ ಬೆಳಗಿ
ಕನ್ನಡದ ನುಡಿ ಸೇವೆಯನುಗೈಯೆ.

ಏರಿಸುವೆನು ಕನ್ನಡದ ಬಾವುಟವ
ಕನ್ನಡಿಗರ ಪ್ರಾಣಧನವ ಪುಳಕಿಸಿ
ಕನ್ನಡದ ಸಿರಿಸೊಬಗನು ಬೆಳಗಿಸೆ. ||ಹ||

ಬೆಳಗುವೆನು ಕನ್ನಡದ ಕಳಸವನು
ಕನ್ನಡಿಗರ ಮನೆಬೆಳಗಿ ತೊಳಗಿಸಿ
ಕನ್ನಡದ ಕಸ್ತೂರಿಯ ಪರಿಮಳಿಸೆ. ||ಹ||

ಹಾಡುವೆನು ಕನ್ನಡದ ಗೀತೆಗಳ
ಕನ್ನಡಿಗರ ಮನವನು ನೆರೆ ಮುಟ್ಟಿಸಿ
ಕನ್ನಡದ ಭಕ್ತಿಯನು ಪ್ರಚೋದಿಸೆ. ||ಹ||

ಕನ್ನಡವೇ ಕಣ್ಮಣಿ ಕನ್ನಡಿಗರಿಗೆ
ಕನ್ನಡವೇ ಕಸ್ತೂರಿ ಕನ್ನಡಿಗರಿಗೆ
ಕನ್ನಡವೇ ಮಾನನಿಧಿ ಕನ್ನಡಿಗರಿಗೆ. ||ಹ||

— o —

## ಕನ್ನಡದ....

ಕನ್ನಡದ ಕಣ್ಮಣಿ ಕವೇರ ತನಯೆ ಕಾವೇರಿ !
ಕನ್ನಾಡಿನ ಜೀವನಾಡಿಯು ನೀನೇ ಚಿನ್ನಾರಿ !
ನಿನ್ನ ಸ್ವಚ್ಛ ಜಲಪಾನ ವರ ಅಮೃತ ಪಾನ !

ಕನ್ನಡಿಗರಿಗೆ ಕನ್ನಡ ನುಡಿಗೆ ಕನ್ನಡಾಂಬೆಗೆ
ನೀನೇ ಸಕಲ ರೀತಿಯಲಿ ಪರಿಪುಣ್ಯಾಧಾರ
ನೀನೇ ಮಾತೃಮಯಿ ಪರಂಜ್ಯೋತಿಮಯಿ ಕಾವೇರಿ ! ||ಕ||

ಬ್ರಹ್ಮಗಿರಿ ತಲ ಸಂಭವೆ ಕೊಡಗಿನ ಕಡು ಚಲುವೆ
ಲೋಕ ಪಾವನಿ ಪಾಪ ಪರಿತಾಪಗಳ ವಿನಾಶಿನಿ
ಶ್ರೀಮಂತ ಮಣಿಮುಕುಟ ಪರಿವೇಶಿ ಶ್ರೀಕಾವೇರಿ ! ||ಕ||

ಸಮಗ್ರ ಕನ್ನಡನಾಡಿಗೆ ಕನ್ನಡಕುಲಕೋಟಿಗೆ
ಕನ್ನಡ ನುಡಿ ಕಸ್ತೂರಿಯ ದಿವ್ಯ ಪರಿಮಳಕೆ
ನೀನೆ ಮಾತಾಮಯಿ ನೀನೆ ಪ್ರಾಣಮಯಿ ನೀನೆ ಸಂರಕ್ಷಕಿ ! ||ಕ||

— ೦ —

# ಕರ್ಣಾಟಕದ....

ಕರ್ಣಾಟಕದ ಸಂಸ್ಕೃತಿಯ ಬೆಳಗಿಸಲು
ಕನ್ನಡದ ಚೆನ್ನುಡಿಯ ತೊಳಗಿಸಲು
ಮನಮುಟ್ಟಿ ಸೇವೆಯ ಸಲಿಸು ಮನವೇ !

ಕನ್ನಡ ದೇವಿಯ ಸಂಪೂಜಿಸಲು
ಭಕ್ತಿಯಿಂ ಕರಸೇವೆಯನುಗೈಯೆ
ಅಕ್ಷರದಾನವ ಮಾಡು ಹೇ ಮನವೇ ! ||ಕ||

ಅಕ್ಕರದ ಅಳ್ಕರೆಯು ಇಲ್ಲದಿಹ
ಬಡತನವು ಬಗೆಹರಿಸದು ಬದುಕಿನ
ಭಂಗಬನ್ನಗಳ ತಿಳಿದಿರು ಮನವೇ ! ||ಕ||

ಭಾರತ ಸ್ವಾತಂತ್ರ್ಯದ ಯಜ್ಞಕಾಂಡದಲಿ
ಸುಟ್ಟುರಿದು ಕರಿಮುರಿಹೋದ ಕನ್ನಡಾಂಬೆಯು
ಸುಖದ ಸವಿಯನಿನ್ನೂ ಕಾಣಲಿಲ್ಲ ತಿಳಿದಿರು ಮನವೇ ! ||ಕ||

ಕಾಯಕದ ಸ್ಫೂರ್ತಿಯೇ ಸಂಜೀವನದ
ಹುರುಳು. ಕಾಯಕವೇ ಸಕಲ ಕ್ಲೇಶ
ಹಾರಿಣಿ. ಕಾಯಕದಿಂದಲೇ ಸುಖ ತಿಳಿ ಮನವೇ ! ||ಕ||

— ೦ —

# ಜಯತು....

ಜಯತು ಜಯ ಜಯ ಜಯಹೇ
ಕರ್ಣಾಟಕ ರಾಜೇಶ್ವರೀ ಜನನೀ
ಜಯತು ಜಯ ಜಯ ಜಯಹೇ
ಭಾರತ ಮಾತೆಯ ಸಿರಿಗುವರಿ.

ಗಿರಿವನ ನದನದಿಗಳ ವರ ತಡಿಯೆ
ಪವಿತ್ರ ದೇಗುಲಗಳ ಸಿರಿಗಣಿಯೆ
ತಣ್ಣನೆ ತಣ್ಪಿನ ಮಂಗಲ ಧರೆಯೆ ||ಜ||

ಪಚ್ಚ ಪರ್ಣಾರ್ಣವದ ಸಿರಿಸಾಲೆ
ಗಂಧದ ಗುಡಿಯೆ ಚಿನ್ನದ ಖನಿಯೆ
ಸುಂದರ ಬಂಧುರ ಕಲೆಗಳ ತಾಯಿಯೆ ||ಜ||

ಭಾರತ ಜನನಿಯ ಮುಡಿಲಿನ ಮುಗುವೇ
ಸುಮ ಸಮುಚ್ಚಯಗಳ ಪರಮ ವರ್ಣ–
ವರ್ಣಾಂತ ಮೋಹನೀಯ ಸೊಬಗೇ ! ||ಜ||

ಮುನಿ ಋಷಿಗಳ ಹಿಂಗದ ತಪಸ್ಸೇ
ಗಾನ ಯೋಗಿಗಳ ರಾಗ ರಸವೇ
ನಿನಗೆ ನಮ್ರ ವಿನಮ್ರ ನಮನಗಳ
ಅರ್ಪಿಸುವೆ ಹೇ ಜನನೀ ! ||ಜ||

— ೦ —

ಶ್ರೀರಾಜರಾಜೇಶ್ವರಿ ಕನ್ನಡಿಗರ ಜನನಿ !
ಪರಮ ಪಂಚದಳಾಯತಾಕ್ಷಿ ಶುಭಕರಿ ಜನನಿ !

ಘನ ನಿಬಿಡ ವನಮಾಲಿನಿಯೆ, ಪರಮ ಪುಣ್ಯವತಿಯೆ
ಕರುನಾಡ ಮಕ್ಕಳ ಚೆಲುವಿನ ಕಣಿಯೆ, ಅನನ್ಯ
ಅನುರಾಗಿಣಿಯೆ ದಿವ್ಯ ಸಂಸ್ಕೃತಿಯ ಮೋಹಿನಿಯೆ
ನಿನ್ನ ಪರಮ ಪದಾಂಬುಜಗಳಿಗೆ ನಮಿಪೆನಮ್ಮ. ||ಶ್ರೀ||

ಷೋಡಶ ಕಳೆಗಳುಳ್ಳ ನಿನ್ನ ಮೊಗದಲಿ ಅರಳಿ
ಬಿರಿದ ಮುಗುಳು ಬಾಡದೆ ನಳನಳಿಸಲಿ ಸದಾ
ಜೀವನಕೆ ನವ್ಯ ಚೇತನವ ತುಂಬಿ ಪಾಲಿಸು
ನಿನ್ನ ಹಾಲನು ಕುಡಿದು ಬೆಳೆದ ಮಕ್ಕಳ ತಾಯೆ ! ||ಶ್ರೀ||

ಭಾರತ ಜನನಿಯು ಸಹಜಾತೆ ವರಶ್ರೀಮಂತೆ
ಸುಗಂಧ ಪರಿಮಳ ವಿಖ್ಯಾತೆ ಸೌಂದರ್ಯ ಪೂತೇ
ನಯವಿನಯ ಸೌಶೀಲ್ಯ ಪ್ರಮೋದಿನಿ, ಪ್ರತಿನಿತ್ಯ
ಪ್ರೇಮಾಮೃತ ವರ್ಷಿಣೀ ನಿನಗೆ ನಮ್ರ ನಮನಂ. ||ಶ್ರೀ||

— ೦ —

# ಏಳುಧೀರರ....

ಏಳು, ಧೀರರ ಮಂಗಳ ಖನೀ ದಿವ್ಯ ಮಾನಿನೀ
ಜನನೀ ಜಗದೇಕ ಸುರಸುಂದರಿ ಮಾತೃಮಯೀ
ತುಂಗಾ ಭದ್ರಾ ಶರಾವತಿ ಕಾಳೀ ಕಾವೇರಿಗಳ ತಾಯಿ !

ಏಳು ಧೀರರರಾಣಿ, ಏಳು ಶೂರರ ತಾಯಿ
ಏಳು ಕನ್ನಡಾಂಬೆ ಕಮಲದಳಾಯತಾಕ್ಷೀ
ಜ್ಞಾನಧನ ಧಾರಿಣೀ ಪರಮ ವರದಾಯಕೀ ||ಏ||

ಕನ್ನಡಿಗರ ತಾಯಿ ಕನಕಾಂಗಿ ಕಾವೇರೀ
ಕಮನೀಯ ಕಠೋರ ನಿಯತಿ ನೀತಿ ಪಾಲಿನೀ
ಸಕಲ ಕಲಾ ಕಲೆಗಳ ತಾಯಿ ಸ್ಫೂರ್ತಿಕಾರಿಣೀ ||ಏ||

ಏಳು ಕನ್ನಡಿಗರ ಪರಮ ವೀರ ಜನನೀ
ಏಳು, ಎದ್ದೇಳು ! ಸಿಡಿದೇಳು ಪ್ರಗತಿ ಪಥಕೆ
ಮುನ್ನಡೆಸು ಮಕ್ಕಳ ವಿಶ್ವಲೋಕದ ವೀಥಿಗೆ ||ಏ||

— o —

# ನಮಿಸುವೆನು....

ನಮಿಸುವೆನು ಶಿರವ ಬಾಗಿ ಕನ್ನಡಿಗರ ಮಾತೆಯೇ
ಬಾರೆನ್ನ ಸುರಸುಂದರ ಕರ್ಣಾಟಕ ಮಾತೆಯೇ !

ದೇವೀ ಪರಮ ಪೂಜಿತೇ ಜ್ಞಾನಮಯಿ ಸುಖದಾಯೀ
ಸಕಲ ಪ್ರಜೆಗಳ ನೆಚ್ಚಿನ ಪವಿತ್ರ ಮಾತೃಮಯೀ
ಲೋಕ ಪೂಜಿತೇ ಭಾರತಾಂಬೆಯ ತನುಜಾತೇ
ಗುರುಜನರ ಗುರುಕುಲ ಸಂಸ್ಥಾಪಿತ ಸುಸ್ಥಾನೇ ! ||ನ||

ಯಾದವ ಕುಲಮಣಿ ಕನಕ ಕಂಕಣಾಂಶು ಶೋಭಿತೇ
ವಿಜಯನಗರ ಮಂಗಲ ಮಣಿಭೂಷಣ ಬಂಧುರೇ
ಸಾಧು ಸಂತರ ಸತ್ಕಥಾ ಕೀರ್ತಿತ ರಾಗ ಕಂಧರೇ
ಆಚಂದ್ರಾರ್ಕ ಸತ್ಕೀರ್ತಿಯ ಪರಿಮಳ ಭೇರಿಧ್ವಾನೇ ! ||ನ||

ಗಿರಿವನ ನದಿಗಳ ಸುಂದರ ಮಾಲಾಧಾರಿಣೀ
ಹಚ್ಚ ಹಸುರಿನ ನೀಲಿ ವರ್ಣಮಯ ಸುಮಮಾಲೆ
ವಿವಿಧ ಫಲಪುಷ್ಪ ಧಾನ್ಯರಾಶಿಯ ಸಂಮೃದ್ಧಮಯೀ
ನಿತ್ಯ ಸಮಶೀತೋಷ್ಣವಲಯ ಭುವನ ಮನಮೋಹಿನೀ ||ನ||

— ೦ —

# ಏಳಿ ಎದ್ದೇಳಿ....

ಏಳಿ, ಎದ್ದೇಳಿ ! ಎಲ್ಲ ಸುಧರ್ಮ ಕರ್ಮ ವೀರರೇ
ಏಳಿ ಸಿಡಿದೇಳಿ ನೀವೇಳದೆಯೆ ನಡೆಯದೇನು.

ಕೇಳಿರಿ ಕೇಳಿರಿ ಕರ್ಮವೀರರೇ ರಾಷ್ಟ್ರೀಯ
ಸ್ಥಿತಿಯರಿತು ಎದ್ದೇಳಿ ಧೀರರೇ ಎದ್ದೇಳಿ ! ||ಏ||

ಕಟ್ಟುವ ಕೈ ನಿಮ್ಮವು ಆಳುವ ಕೈ ನಿಮ್ಮವು
ಏಳಿ ಎದ್ದೇಳಿ ಕರ್ಮಾಸಕ್ತರಾಗಿ ಎದ್ದೇಳಿ ||ಏ||

ಭಾರತ ಜನನಿಯ ನಿಟನಿಟಲೆನುವ ಎಲುಬಿನ
ಹಂದರಕೆ ರಕ್ತಮಾಂಸವ ತುಂಬಲು ಏಳಿ ! ||ಏ||

ತಾಯ ಕರೆ ಕೇಳಿ ಧೀರ ಕರ್ಮ ವೀರರೇ !
ಕಣ್ತೆರೆದು ನೋಡಿ ಪರಿಭಾವಿಸಿ ನೋಡಿ ಎದ್ದೇಳಿ ! ||ಏ||

ನಿಮ್ಮ ತಾಯಿ, ನಿಮ್ಮಯ ರಾಷ್ಟ್ರ, ನಿಮ್ಮದೆ ನೆಲ
ಎಲ್ಲರೊಗ್ಗಿನಲಿ ದುಡಿಯಿರಿ ದುಡಿದು ಕಟ್ಟಿ ರಾಷ್ಟ್ರವ ||ಏ||

ಏಳಿ ಎದ್ದೇಳಿ ಧೀರ ಧರ್ಮ ಕರ್ಮವೀರರೇ
ಏಳಿ ಸಿಡಿದೇಳಿ ನೀವೆಳದೆಯೆ ನಡೆಯದೇನು ||ಏ||

— o —

ಗಣೇಶ ಸ್ತುತಿ

# ಎಲ್ಲಿರುವೆ....

ಎಲ್ಲಿರುವೆ ಬಾರೋ ಮುದ್ದು ಲಂಬೋದರ
ವಿದ್ಯಾಶಂಕರ ಗೌರೀ ಕುಮಾರ ಕಂಠೀರವ
ನಿನ್ನ ದಯೆಯಿಲ್ಲದೆಯೆ ಎನ್ನ ಬಾಳು ಬಂಜರ

ಮನು ಕುಲದಲಿ ಸಂಜನಿಸಿ ಬಾಳಿನ
ಹಂಗಿಗೆ ಒಳಗಾಗಿ ಸುವ್ಯರ್ಥವಾಯ್ತು
ಜೀವಮಾನ, ಬರಿದೆ ಕಳೆದೆ ಕಾಲಮಾನ
ನೀನೇ ಕರುಣೆಯಿಂ ಉದ್ಧರಿಸೆನ್ನ ಜೀವಮಾನ ||ಎ||

ಲೋಕದ ವಿದ್ಯೆಯೆಲ್ಲ ನಿನ್ನ ಅಧೀನ
ಇರುತಿರೆ ಆನೇಂ ಪೆರತೆ? ಎನ್ನೆಲ್ಲ
ಕರ್ಮಕಾಂಡ ನಿನ್ನ ಅವ ಕೃಪೆಯಿಂದ
ನೀನೆನ್ನ ಉದ್ಧರಿಸು ಪರಿಪಾವನ ಮೂರ್ತೆ ||ಎ||

ಎನ್ನವರಿಲ್ಲ ಮನಮರುಗಿ ಕರುಣಿಸುವರೆ
ದುಃಖ ಸಂಕಟವೆ ಎನ್ನ ಬಾಳೆಲ್ಲ. ಇನ್ನು
ನೀನಲ್ಲದೆ ಕಾಪಿಡುವವರಾರೈ ತಂದೆಯೆ
ನೀ ಬಂದೆನ್ನ ಉದ್ಧರಿಸು ದೇವಗುರುವೆ ! ||ಎ||

— ೦ —

## ಶಿವಶಂಕರ....

ಶಿವಶಂಕರ ಗೌರೀ ಮನೋಹರ
ಬೇಡುವೆನು ನಿನ್ನಯ ವರ ಕರುಣೆಯ

ಕೈಲಾಸ ವಾಸ ದೀನ ಬಂಧೋ
ದಯಾಘನ ಸುರಾರ್ಚಿತ ಪ್ರಭುವೇ !
ಮನ್ನಿಸೆನ್ನ ಸರ್ವಾಪರಾಧವ
ಭಕ್ತಿಯಿಂದ ಬೇಡುವೆನು ಪಾಹಿಮಾಂ ||ಶಿ||

ವಂದಿಸುವೆನು ಚಂದದಿಂದ ನಿನ್ನಯ
ಪಾದಾರವಿಂದಗಳಿಗೆ ಹೇ ನಂದೀಶ
ಸುರನದಿಯಲಿ ಮಿಂದು ತವದರುಶನ
ಬಯಸಿ ಬಂದಿಹೆನಯ್ಯ ಪಾಹಿಮಾಂ ||ಶಿ||

ಮನವೆಂಬ ಮರ್ಕಟವೆನ್ನ ನಿಲ್ಲದು
ದೃಢಗತಿಯಲಿ ನಿನ್ನ ಪಾದಗಳ
ಪಂಕೇಜದಲಿ ಮಕರಂಪವ ಹೀರೆ
ನೀನೇ ಪರಮ ದಯಾಳು ಪಾಹಿಮಾಂ ||ಶಿ||

— o —

# ಚಂದ್ರ ಚೂಡ....

ಚಂದ್ರಚೂಡ ಶಿವಶಂಕರ ಪಾರ್ವತೀ ರಮಣ
ನೆರೆ ನಂಬಿದೆನೋ ನಿನ್ನಯ ಶ್ರೀಚರಣ.

ನೀನೆ ವಿಭು ನೀನೇ ಸ್ವಯಂಭು ಮನ್ಮಥ ವೈರಿ
ಕಾಮುಕ್ಲೇಶದ ಮಡುವಿನೆಂದೆತ್ತಿ ಮುನ್ನಡೆಸು
ಸರಿ ಪಥದಿ ಜಗತ್ ಪಾಲಕ ನಿನ್ನ ಸ್ಮರಣೆಯು
ಸದ್ಭಾವ ಘಮಘಮಿಸಲಿ ಸದಾ ಕಸ್ತೂರಿಯೈಸಿ. ||ಚ||

ಸ್ವಾಮಿಾ ನಿನ್ನ ಪಾದ ಕಮಲಗಳನು ಮಿಾರಿದ
ಪ್ರಿಯವಸ್ತುವುಂಟೇ ಜಗದೊಳ್ ಎನ್ನ ತಣಿಸಲ್
ಒಡಲಾಳದಲಿ ಧಗಧಗಿಸುತಿದೆ ದಾವಾಗ್ನಿ
ನೀನಲ್ಲದಾರಿಹರೆನಗೆ ಶಂಭೋ ಶಿವಶಂಕರ. ||ಚ||

ನೀನೇ ಬಂಧು, ನೀನೇ ತಾಯಿ ತಂದೆ
ನೀನೇ ಸಂಸಾರ ಸಾಗರದ ಹರಿಕಾರ
ನಿನ್ನಿಂದ ಶಾಂತಿ ಸಮಾಧಾನವ ಬಯಸುವೆ
ದೇವ ಪರಾತ್ಪರನೇ ಬಂದು ಉದ್ಧರಿಸೆನ್ನ. ||ಚ||

— o —

# ಜಯ ಶಂಕರ....

ಜಯ ಶಂಕರ ಪ್ರಿಯಕರ ಶುಭಕರ
ನಿನಗೆ ನಮೋ ಎನ್ನುವೆ ಮಹೇಶ್ವರಾ !

ನಿನ್ನನುಳಿದು ಬದುಕಲುಂಟೇ ಭವದಿ
ಹಗಲಿರುಳು ಪರಿತಪಿಸುತಿಹೆ ನಿನ್ನ
ನೆನೆನೆನೆದು ಪಾದಪದ್ಮಂಗಳಲಿ ಸತತ
ಹೊರಳಲೆಂದು ಪರಿಪಾವನ ಮೂರ್ತೇ ! ||ಜ||

ಎನ್ನಯ ಪರಮ ಪ್ರಾಣವಲ್ಲಭ
ನಿನ್ನ ಪಾದಾರವಿಂದಗಳಲಿ ಮಧು
ಹೀರುವ ಭೃಂಗವು ನಾನು ಕೈಬಿಡದಿರು
ಬೇಡುವೆ ಶ್ರೀಶಂಭೋ ಶಿವಶಂಕರಾ ! ||ಜ||

ಭವ್ಯ ಬ್ರಹ್ಮಾಂಡದ ಪರಮ ಸೂತ್ರದಾರ
ತ್ರಿಲೋಕದೊಡೆಯ, ನಿನ್ನ ಕೃಪಾ ಕಟಾಕ್ಷವಿಲ್ಲದೆ
ಜಗವುಂಟೇ ? ಜೀವ ಕೋಟಿಯುಂಟೇ ?
ನಿನ್ನ ಬೇಡುವೆ ಪರಿಪಾಲಿಸು ಶಿವಶಂಕರಾ ! ||ಜ||

— ೦ —

## ಕೈಲಾಸ....

ಕೈಲಾಸ ಪರ್ವತದ ಮೇಲೆ ಹೊನ್ನ
ಹೊತ್ತರೆಯ ಅಮಿತ ಶಾಂತಿಯ ಲೀಲೆ.
ಮುಂಜಾವದ ತಣ್ಣನೆ ತಣ್ಪಿನಲಿ
ನರ್ತಿಸುತಿವೆ ನವಿಲುಗಳ ಜೋಡಿ
ಬಾರಯ್ಯ ಗಿರಿಜಾಶಂಕರ !

ಪರ್ಣಾರ್ಣವದಲಿ ಘಮಘಮಿಸುತಿವೆ
ಅರೆ ಬಿರಿದ ಸುಮ ಸಮುಚ್ಚಯ ಕೋಟಿ
ಸುರ ಸುಂದರ ಸೌರಭವನು ಬೀರಿ
ನಿನ್ನ ಮನಕಾನಂದ ತುಂಬಲುರೆ
ಬಾರಯ್ಯ ಗಿರಿಜಾಶಂಕರ ! ||ಕೈ||

ಪಾರ್ವತೀರಮಣ ನಂಬಿದೆ ತವಚರಣ
ಭವ್ಯ ವಿಶ್ವವ್ಯಾಪಕ ನಿನ್ನ ಘನ
ಮಹಿಮೆಯನರಿಯದಾದೆ ಎನಲೆನಗೆ
ಲಜ್ಜೆಗೇಡು ಪರಮಾತ್ಮ ಪರಾತ್ಪರ
ಬಾರಯ್ಯ ಗಿರಿಜಾಶಂಕರ ! ||ಕೈ||

— ० —

# ಹೇ ಪ್ರಪಿತಾಮಹ....

ಹೇ ಪ್ರಪಿತಾಮಹ ನಿತ್ಯ ಪ್ರಬುದ್ಧ
ಸಚ್ಚಿದಾನಂದಾನಂದ ಸ್ವರೂಪ
ನಿನಗೆ ಅನಂತ ನಮನಂ.

ಕಣ್ಣ ಮುಂದಿರೆ ಕವಲು ದಾರಿಗಳು
ಮುಂಗಾಣದೆ ತೊಳಲುತಿಹೆನು ದೇವ
ಹಿಂದುಳಿಯಲರಿಯೆ ಮುಂಬರಿಯಲರಿಯೆ
ಇದ್ದಲ್ಲಿದ್ದು ನಿನ್ನ ಬೇಡುತಿಹೆನು ನಮಿಸಿ. ||ಹೇ||

ಎನಿತು ಕಾಲ ಎದುರು ನೋಡಲಿ ನಿನ್ನ
ಪರಮ ದಯಾಸಿಂಧು ಕರುಣೆ ದೋರಿ
ಕಡೆ ಹಾಯಿಸು ನಡು ನೀರಿನೊಳ್ ಕೈ
ಬಿಡದೆ ಕೈಮುಗಿದು ಬೇಡುವೆ ಶಿವನೇ ! ||ಹೇ||

ಎನ್ನ ದೀನ ಮೊರೆಯನು ಆಲಿಸಯ್ಯ,
ಕಿವಿಗೊಟ್ಟು ಭವ ಸಾಗರದಾಳದಲಿ
ಮುಳುಗುತಿರುವೆ ಗತಿಗಾಣದೆಯೆ
ಕರುಣದಿಂದ ಪಾಲಿಸೈ ಹೇ ಪ್ರಭುವೇ ! ||ಹೇ||

— o —

ಶನಕಾದಿ ಮುನಿ ಋಷಿಗಳೆಲ್ಲ ದೇವ
ಗಂಗೆಯಲಿ ನಿಂದು ಉಪನಿಷತ್ತುಗಳ
ಪಠಣಗೈಯುತಿಹರು ಪರಶಿವನೇ
ದರುಶನವ ನೀಡು ಪ್ರಭೋ !

ನಂದಿಯು ನಿಂದು ಮಡಿಗೊಂಡು
ನಿನ್ನರಮನೆಯ ಬಾಗಿಲಲಿ ಕಾದಿಹನು,
ನಿನಗಾಗಿ ಭಯ ಭಕ್ತಿಗಳಿಂದಲಿ
ದರುಶನವ ನೀಡು ಪ್ರಭೋ ! ||ಶ||

ನಿರ್ಮಲ ಚಿತ್ತನಾದ ಕಾಮಾರಿಯೇ
ನಿನ್ನ ಕಾಲಾತೀತ ಲೋಕದಲಿ
ನೀನಲ್ಲದಾರು ಕಾವರಯ್ಯಾ
ದರುಶನವ ನೀಡು ಪ್ರಭೋ ! ||ಶ||

ಮಿಸುನಿ ಪರ್ವತವೇ ನಿನ್ನದಾಗಿರೆ
ಪಾರ್ವತಿಯು ನಿನ್ನವಳಿರುತಿರೆ
ನಾನೇನೀವೆ ನಿನಗೆನ್ನ ಭಕ್ತಿಯಲ್ಲದೆ
ದರುಶನವ ನೀಡು ಪ್ರಭೋ ! ||ಶ||

—o—

# ಅನುದಿನವು....

ಅನುದಿನವು ಹದವರಿತು ಪೂಜಿಸಲರಿಯೆ
ಭಕ್ತಿಯಿಂದ ಮನವರಿತು ಧ್ಯಾನಿಸಲರಿಯೆ
ವೇದ ಶಾಸ್ತ್ರ ಪುರಾಣಗಳ ಕೇಳರಿಯೆ.

ಅಕ್ಷರ ಜ್ಞಾನವಿಲ್ಲದೆ ಅರಳದು ಮನಃಕುಟ್ಮಲ
ಕಾಲ ಪ್ರಜ್ಞೆಯಿಲ್ಲದೆ ಬೆಳಗದು ಚಿತ್ತದೀಪ್ತಿ
ನಿನ್ನ ಧ್ಯಾನವರಿಯದೆ ಹಾಡದೆನ್ನೆದೆಯ ರಾಗಿಣಿ. ||ಅ||

ನೀನೆನ್ನ ನರಜನುಮಕೊಗೆದುಪಕರಿಸಿದೊಡೇನ್ನೈ
ನಿನ್ನ ಪದಯುಗ್ಮಗಳನೋಲ್ಲೈಪ ಸದ್ಗತಿಯಿಲ್ಲದೆ
ನರಳುತಿಹೆ ಕೊಚ್ಚೆಯ ಪುಳುವಾಗಿ ದೇವರ ದೇವ ! ||ಅ||

ನೀನೆ ಕೈಪಿಡಿದು ನಿನ್ನಡಿಯೆಡೆಗೆ ನಡೆಸೆನ್ನನನುದಿನ
ನಿನ್ನ ಪಾದ ಸೇವೆಯನು ಗೈಯುತಲಿ ಮಡಿಯುವೆನು
ಸದ್ಗತಿಯ ನೀಡು ಪರಶಿವ ಪರಾತ್ಪರನೇ ! ||ಅ||

— ೦ —

## ಬಾಳಿನ....

ಬಾಳಿನ ರೂಪಕದಲಿ ಸುಖ–ದುಃಖಗಳೆರಡೂ
ಬಲೂ ಸುಂದರಾತಿಸುಂದರವೇ ಪ್ರಭುವೇ !
ಪ್ರೇಮದ ರೂಪಕದಲಿ ತ್ಯಾಗ–ಭೋಗಗಳೆರಡೂ
ಮಿಂಚಿನ ಗೊಂಚಲಿನಂತೆ ಪರಮ ಪವಿತ್ರವೇ !

ಅನುದಿನಗಳ ಲಾಭ–ನಷ್ಟಗಳೆರಡೂ
ಜೀವನ ಸಾರ್ಥಕ್ಯವೆಂಬೆ ಪ್ರಭುವೇ !
ಮತ್ತೆಲ್ಲ ರೋಗ ರುಜಿನಗಳ ಭಯಂಕರ
ಅನುಭವ ಸದಾ ಇರುತಿರೆ ಮರೆಯಲುಂಟೆ ನಿನ್ನ ?

ಹೇ ರುದ್ರ ಭಯಂಕರ ಪರಮ ದುಃಖವೇ !
ಜೀವನದ ಅವಿಚ್ಛೇದ ವೇದನಾ ರೂಪಶ್ರೀಯೇ
ಬಾಳನ್ನು ತೊರೆದು ನೀನೆಲ್ಲಿಗೆ ಪೋದಪೆ ?
ನಿನ್ನಿಂದಲೇ ಈ ಜೀವನೋದ್ಧಾರ ನೀನೇ ಚಿರಸತ್ಯ !

ಘನತರ ದುಃಖವಿಲ್ಲದ ಬದುಕುಂಟೆ ಭವದಿಯಲಿ ?
ದುಃಖವೇ ಜೀವನ ಸತ್ಯ. ಸುಖವೇ, ನಿತ್ಯಮಿಥ್ಯ.
ಓ ಎನ್ನ ಪರಮ ಬಂಧು ದುಃಖದ್ರವ್ಯವೇ
ನೀನಿಲ್ಲದ ಚಣವೆನ್ನ ಬಲು ಕಠಿಣ ಪ್ರಭುವೇ !

— ೦ —

# ವಿಷಯಗಳ....

ವಿಷಯಗಳ ವಾಸನೆಯು ಕೋಳ್ಕೈಸರ
ಬೆಂಚೆಯಲಿ ಅದ್ದಿದೆಯೆನ್ನ ಶಂಕರಾ !

ಅಕ್ಕರದ ಅರಿವು ಇಲ್ಲದೆನ್ನೊಳ್
ಧರ್ಮ ಶ್ರದ್ಧೆಯುಮೆಂತು ಮುಂಬೆಳೆವುದು ?
ಬಾಳಿಗೆ ಬೆಳಕನೀಯದೆಯೊ ನೀನೆ
ವಂಚಿಸಿದೆ ಹೇ ಪ್ರಭು ಪರಶಿವನೆ ! ||ವಿ||

ಧನಕನಕವ ನಾ ಬಯಸಿದೆನಿಲ್ಲ
ಕೀರ್ತಿ ಕಳಸವ ಬೇಡಿದೆನಿಲ್ಲ
ನಿನ್ನ ಚರಣ ಸೇವೆಯೆನಗೆ ನಿಚ್ಚ
ವಾಗಲ್ಕೆ ಹೇ ಪ್ರಭು ಪರಶಿವನೇ ! ||ವಿ||

ದೀನಾತಿದೀನೆಯು ನಾನು ಬೃಹದ್
ಬ್ರಹ್ಮಾಂಡದ ಅಧಿಪತಿಯು ನೀನು
ನಿನ್ನ ದಿವ್ಯ ಸಮಾಗಮವ ಬಯಸುವೆನು
ದೇವಾಧಿದೇವನೇ ದಯೆದೋರೆನಗೆ. ||ವಿ||

— o —

# ಕಾಯಲಾರೆನೊ....

ಕಾಯಲಾರೆನೊ ಪರ ಮನೆಯ ಬಾಗಿಲಿನೊಳು
ಕುನ್ನಿಯಂತೆ ಎನ್ನ ತುತ್ತುಕೂಳಿಗಾಗಿ ಗೇಣು
ಬಟ್ಟೆಗಾಗಿ ಎಂಜೆನೋ ಪರಮಾತ್ಮ ಶಿವನೇ !

ಕೀಳು ಮಾತುಗಳ ಬಾಣಾಜಲದಲಿ ಅದ್ದಿ ತೆಗಳಿ
ದೂರಿ ಜಡಿ ಕುಟ್ಟುವರೆಲ್ಲ ನಿಷ್ಕರುಣೆಯಿಂದಲಿ
ತಾಳಲಾರೆನೊ ಬಾಳಲಾರೆನೊ ಶ್ರೀಗೌರೀಪತಿಯೆ ! ||ಕಾ||

ಭವ ತಾಪವಿದು ಸಾಮಾನ್ಯವಲ್ಲವೀ ಧರಣಿಯಲಿ
ನೋಯಲಾರೆ ನೆಯ್ಯಲಾರೆ ಎನಿತೆನಿತು ಗೆಯ್ದೊಡದು
ಹಾಳಾಯ್ತು ಗೋಳಾಯ್ತು ಪರಿಶ್ರಮ ಪರಶಿವನೇ ! ||ಕಾ||

ನಿನ್ನ ಸೇವೆಯ ಬಯಸಿಯೂ ಮಾಡಲಾರೆ
ನೆನೆನೆನೆದು ನಿನ್ನ ಕಂಬನಿಗರೆವುದೊಂದೇ
ದಾರಿಯೆನಗೆ ಕರುಣದಿ ಪರಾಮರಿಸು ಶಿವನೇ ! ||ಕಾ||

— o —

# ಭವಹರ....

ಭವಹರ ಶಿವಶಂಕರ ಪಾರ್ವತೀ
ರಮಣ ತೋರೆನಗೆ ದಿವ್ಯ ಕರುಣಾ

ಭಯಭಕ್ತಿಯಿಂದಲಿ ನಮಿಪೆ ನಿನಗೆ
ನಿರ್ಲಕ್ಷಿಸದಿರೆನ್ನ ಜಗಧೀಶ ಈಶ !
ಕಣ್ಣಪ್ಪನ ಭಕ್ತಿಗೆ ಮೆಚ್ಚಿ ದಯೆ ದೋರಿದ
ನಿನಗೆ ನಾನೆಂತು ಹೊರತಾದೆನೊ ಪ್ರಭುವೇ ! ||ಭ||

ಮನ್ಮಥ ವೈರಿ ಭಕ್ತ ಜನ ಪ್ರಿಯ
ಸತ್ವರಜಸ್ತಮಸ್ಸುಗಳ ನಿಜ ಕಾರಣ,
ಮುನಿಜನ ಗೋಚರ ರುದ್ರಮೂರ್ತಿ
ಚಿದಾನಂದ ಸ್ವರೂಪ ಹೇ ಜೀವೇಶ ! ||ಭ|

ಕೈಲಾಸ ವಾಸ ಶ್ರೀ ಪುರುಷೋತ್ತಮ
ತ್ರಿಲೋಕದೊಡೆಯ ಸುಜನ ಮಂದಾರ
ಸೃಷ್ಟಿದಾತ ಪರಮ ಪೂಜಿತ ಶಿವನೇ
ನಮಸ್ತೇ ನಮಸ್ತೇ ನಮಸ್ತೇ ! ||ಭ||

— o —

# ನಿನ್ನ ಬಳಿ....

ನಿನ್ನ ಬಳಿಗೈಯುವನಕೆನ್ನೊಳ್
ನಾಮರೂಪ ವೇಶ ಭೂಷಣವಲ್ಲದೆ
ಏನಿಹುದಯ್ಯಾ ಹುರುಳು ಜೀವೇಶನೇ !

ದೇವ ನೀನು ಜಗತ್ಪತಿ ಇರಲಾನು
ಏನೊಂದರಿಯದ ಮಂದಮತಿಯ ಪಶುವು
ನಿನಗೆ ಶರಣು ಶರಣೆಂಬೆ ಕೃಪೆದೋರೆನಗೆ. ||ನಿ||

ಮನಃಚಿತ್ತಗಳೆನ್ನ ನಿಚ್ಚ ತವಪಾದ
ಪದ್ಮ ಧೂಳಿಯಲಿ ಹುದುಗಿ ಹಾಡಲಿ
ಸ್ತೋತ್ರಗಳ ಭಕುತಿಯ ಭಾವದಲಿ. ||ನಿ||

ಗೌರೀಧವನೇ ನಿನ್ನ ಪೂಜಿಸಲು
ಹೃದಯ ಕಮಲವೆಂಬ ಪುಷ್ಪವನು
ಸಮರ್ಪಿಸಿ ತವ ಕೃಪೆಯನು ಬೇಡುವೆ. ||ನಿ||

ಮಾನಸ ಪೂಜೆಯನರಿಯದಾದೆನ್ನೈ
ಶ್ರೀ ಪುರುಷೋತ್ತಮನೇ ನೀನೆನ್ನನು
ಸರಿ ದಾರಿಯಲಿ ಕೈಹಿಡಿದು ನಡೆಸು ಕೈವಲ್ಯಕೆ. ||ನಿ||

— ੦ —

# ನಿನ್ನ ಕರುಣೆಗೆ....

ನಿನ್ನ ಕರುಣೆಗೆ ಮೇರೆಯಿಲ್ಲ ನಿನ್ನ ಕೊಡುಗೈಗೆ
ಎಲ್ಲಿಯೋ ಇಲ್ಲ. ಹೇ ಪ್ರಭು ಪರಮೇಶ್ವರನೆ !

ಈ ಬ್ರಹ್ಮಾಂಡವು ನಿನ್ನ ಕೃಪಾ ಸಾಗರವು
ನಿನ್ನ ಕರುಣೆಯೆ ಬುದ್ಧಿಜೀವಿಗಳೆತ್ತ ಮನುಕುಲವು
ನೀನೆ ಪರಮ ದಾತಾ ತ್ರಿಲೋಕ ಪ್ರದಾಯಕ ! ||ನಿ||

ಹೇ ವಿಭುವೆ ! ಅದಾವ ಪೂರ್ವ ಜನ್ಮದ ಪುಣ್ಯ
ಫಲದಿಂದ ಮನುಕುಲದಲಿ ಸಂಜನಿಸಿರ್ದೊಡೇನ್ನೈ
ತವ ಪಾದದ್ವಯುಗಳ ದಿವ್ಯ ದರುಶನವಿಹುದೆ ? ||ನಿ||

ನಿತ್ಯನಿರಂತರ ನಿನ್ನ ಭಜಿಸಿ ಧ್ಯಾನಿಸಿ
ಘನ ಮಹಿಮೆಯನು ನೆನೆವುದೆ ಘನರೋಚಕ ಮನಕೆ
ನೀನೆನ್ನ ಸಂರಕ್ಷಿಸಯ್ಯ ಪರಮೇಶ್ವರನೇ ! ||ನಿ||

— ೦ —

# ವಿಭುವೇ....

ವಿಭುವೇ, ವಿರಾಟ್ ವಿಶ್ವ ವಿಧಾತ !
ನಮಿಸುವೆ ನಿನಗೆ ಪರಮ ವಿಖ್ಯಾತ
ನಿನ್ನ ಕರುಣಾಪಾಂಗವ ಹರಿಸಿತ್ತ
ಅನವರತ ಪಾರ್ವತಿ ಪರಮೇಶ್ವರ
ನಾನಂಬಿದೆನೊ ನಿನ್ನ ಶುಭಕರ !

ವರದೀನ ಬಂಧೋ ದಯಾ ಸಿಂಧು
ನೀನೇ ಅನಾಥ ಬಂಧು, ನೀನೇ
ಬೃಹದ್ ಬ್ರಹ್ಮಾಂಡ ಸೃಷ್ಟಿದಾತಾ !
ನೀನಹುದು ಪ್ರಶಾಂತ ಪರಮೋಚ್ಛ
ವೇದ ವೇದಾಂತ ಪ್ರಿಯ ಪರಶಿವನೇ. ||ವಿ||

ಪರಮ ದೀನೆಯು ನಾನು. ಈ ವಿರಾಟ್
ಬ್ರಹ್ಮಾಂಡ ಲೋಕಕೆ ವಿಧಿ ವಿಧಾತನು
ನೀನು. ನಿನ್ನ ಕೃಪೆಯಿಂದಲಿ ಸೃಷ್ಟಿ
ನಿನ್ನ ಕಾರ್ಯಕಾರಣದಾಳವನು
ಅರಿಯುಬಲ್ಲವರಾರೈ ಪ್ರಭುವೇ ? ||ವಿ||

ನಿನ್ನ ಪ್ರಸನ್ನ ವದನ ಬಿಂಬವ
ನೆನೆಯಲು ಬಲ್ಲೆ, ಧ್ಯಾನಿಸಲು ಬಲ್ಲೆ
ಆದೊಡೇಂ ನಿನ್ನ ಪಾದದ್ವಯವ
ಕಾಣಲಾರೆ ಮುಟ್ಟಿ ನಮಿಸಲಾರೆ
ಎನ್ನಾಸೆ ವ್ಯರ್ಥ ಶಿವಶಂಕರಾ ! ||ವಿ||

— o —

# ಜಗಧೀಶನ....

ಜಗಧೀಶನ ಸೃಷ್ಟಿಯ ಚೆಲುವೆನಿತು
ಸುರ ಸುಂದರ !

ಬ್ರಹ್ಮಾಂಡದ ತಂತ್ರಜ್ಞಾನವೆನಿತೆನಿತು
ಭವ್ಯ ಬಂಧುರ !

ಎಲ್ಲಿ ನೋಡಿದರಲ್ಲಿ ಜಗಧೀಶನ ಚಿನ್ಹೆಯೆ
ಕಾಣುತಿದೆ ರಸಸೃಷ್ಟಿಯ ಭಕ್ತಿ ವಿಶೇಷತೆಗೆ
ಪರೋಕ್ಷವೇಕೋ ಶ್ರೀವರನೆ ಮೈದೋರಿ ರಕ್ಷಿಸೆನ್ನ ||ಜ||

ತಣ್ಣನೆಯ ಸುಸಿಲೆಲರು ಸುಯ್ಯನೆ ಸುಯ್ಯುತಿಹ
ಸುಯ್ದಾನದಲಿಹುದು ಜಗದೀಶನ ಎಳೆಯುಸಿರು
ಪರೋಕ್ಷವೇಕೋ ಶ್ರೀವರನೆ ಮೈದೋರಿ ರಕ್ಷಿಸೆನ್ನ ||ಜ||

ದಿಂದಿಮ್ಮನೆ ನಡೆತಹ ಐರಾವತನಡಿಗಳಲಿ
ನಿನ್ನ ನಡೆಯ ಕಾಂಬುದನು ನೆನೆಯುತಿರೆ ಮನವೆನ್ನ
ಪರೋಕ್ಷವೇಕೋ ಶ್ರೀವರನೆ ಮೈದೋರಿ ರಕ್ಷಿಸೆನ್ನ ||ಜ||

— ೦ —

# ಮನುಕುಲದಲಿ....

ಮನುಕುಲದಲಿ ಸಂಜನಿಸಿದೆ ದೇವ
ನಿನ್ನ ಕೃಪಾ ಕಟಾಕ್ಷ ಒದವಿ ಬರೆ.

ಹೇ ದೀನ ಬಂಧೋ ನಿನ್ನ ದಯೆಗೆ
ಪಾರವಿಲ್ಲ. ನಿನ್ನ ನೆನೆಯದೆ ಚಣ
ಇರಲಾರೆ ನೀನೆನ್ನ ಅಲಕ್ಷಿಸದೆ
ನಡೆಸುತಿಹೆ ದಿನದಿನ ತೀರದ ಹಾದಿಯ. ||ಮ||

ಮುಂದೆ ಹಬ್ಬಿ ಹರಡಿದೆ ಮಹಾಪಥ
ಬಲು ದೂರಕೆ ಕೊನೆಗಾಣದ ಪರಿಯಲಿ
ಕೈಹಿಡಿದು ನಡೆಸಯ್ಯ ಕೊನೆತನಕ
ನಿನ್ನ ನಂಬಿದೆನಯ್ಯ ಘನ ಮಹಿಮ ! ||ಮ||

ಒಂಟಿ ನಡೆಯ ಗೋಳಿನ ಕಾಂಡದಲಿ
ಕೊನೆಗಾಣದ ದೂರ ಪಥವಿಡಿದಿರಲಾನು
ಕಡುಕತ್ತಲೆ ಕವಿದು ಗತಿಮತಿ ತಪ್ಪಿ
ತೊಳಲುತಿಹೆ ಸಲಹೆನ್ನ ಜೀವೇಶನೆ ! ||ಮ||

— o —

# ಕಳೆದುದಾಯುಷ್ಯ....

ಕಳೆದುದಾಯುಷ್ಯ ಜಡನಿದ್ದೆಯೊಳರ್ಧವೆಂದು
ಬಾಲ್ಯ ಕೌಮಾರ್ಯ ಮೇಣ್ ವೃದ್ಧಾಪ್ಯವೆಂದು
ಬಹುಭಾಗ ಕಳೆದುದಯ್ಯ ಕೈಗೆಟುಕದ ಪರಿಯಲಿ !

ಇನ್ನೆಲ್ಲಿ ನಿನ್ನಯ ಧ್ಯಾನ ಸಂಪದಕೆ ಸುಸಮಯ ?
ಭವ ಸಾಗರದ ಮೊಸಳೆಯ ಬಾಯೊಳ್ ಕುಳಿತಿರುವೆ
ನಿನ್ನಯ ಪರಮ ಧ್ಯಾನಕೆ ಹೇ ಲೋಕೇಶನೇ ! ||ಕ||

ಅದಕ್ಕನುಗುಣಮಪ್ಪಿ ನೀ ಕಸಿಯುತಿಹೆ ಚಣಚಣವ
ಏನೆಲ್ಲ ಕಾಮಕಾಮನೆಯ ಜಡಿ ತುಂಬಿ ಮನಕೆ
ನಿನ್ನ ಬಳಿಯಿಂದ ನೂಂಕುತಿಹೆ ದೂರ ಶ್ರೀ ಹರನೇ ! ||ಕ||

ಪಗಲಿರುಳು ನಿನ್ನ ಪರಮ ಧ್ಯಾನ ತಪಸ್ಸಿನಲಿ
ತನುಮನವ ಮುಳುಗಿಸುವಂತೆ ಅನುಗ್ರಹಿಸು
ಕರುಣವದೋರಿ ಹೇ ಪರಮಾತ್ಮ ಪರಶಿವನೇ ! ||ಕ||

— o —

# ನಿನ್ನನರಿಯದೆ....

ನಿನ್ನನರಿಯದೆ ನಿನ್ನ ಸಂಸೇವಿಸದೆ
ಲೋಕದೊಳ್ ಧರ್ಮ ಕಾರ್ಯವೆಸಗದೆ
ಬರಿದೆ ನಿನ್ನ ಕಾಡಿ ಬೇಡಲೇನಹುದು
ತ್ರಿಲೋಕದೊಡೆಯ ಪರಾತ್ಪರನೇ !

ಭವದಿಯಲಿ ಮುಳುಗಿ ಭವರೋಗದಲಿ
ನರಳಿ ಪಾಪ ಪಂಕದ ರಣಗೋಳಿನಲಿ
ನೊಂದು ಬೆಂದು ಬೆಂಡಾಗಿ ನಿನ್ನ ಮರೆತೆ
ತ್ರಿಲೋಕದೊಡೆಯ ಪರಾತ್ಪರನೇ ! ||ನಿ||

ವಿರಾಟ್ ವಿಶ್ವ ಸೃಷ್ಟಿಸಿ ತರತರದ
ಜೀವಕೋಟಿಯ ಬೆಳೆಸಿ ಲೋಕದಲಿ
ಧರ್ಮ ನೀತಿಯ ರೂಪಿಸಿ ಬೆಳಗಿದೆ
ತ್ರಿಲೋಕದೊಡೆಯ ಪರಾತ್ಪರನೇ ! ||ನಿ||

ಸೂರ್ಯ ಚಂದ್ರರುದಯಾಸ್ತಮಾನ
ಕ್ರಿಯಾಶಕ್ತಿಯಲಿ ಭವ್ಯ ಬ್ರಹ್ಮಾಂಡ
ಕೋಟಿಯ ಹಿಡಿ ಮುರಿಗಟ್ಟಿದ ನಿನಗೆ
ನಮಸ್ತೇ ನಮಸ್ತೇ ನಮಸ್ತೇ !

— o —

# ನಿನ್ನ ರಾಮ ಕೃಷ್ಣ....

ನಿನ್ನ ರಾಮ ಕೃಷ್ಣ ಶಿವ ಶ್ರೀವಿಷ್ಣು ಎಂಬರೆಲ್ಲ
ವೇದಾಂತವರಿಯದಾನು ಏನೆನ್ನಲಿ ಪ್ರಭುವೇ !

ಗುಡಿಯಲ್ಲಿ ಗಿರಿಯಲ್ಲಿ ಮನದಲ್ಲಿ ವನದಲ್ಲಿ
ಹುಡುಕುಡುಕಿ ನಿನ್ನ ಬಳಲಿ ಬೆಂಡಾದೆ ಪ್ರಭುವೇ ! ||ನಿ||

ನಿನ್ನ ಕಾಣಲಾರೆ ಕಂಡು ತಿಳಿಯಲಾರೆ ಎನೆ
ತಿಳಿವೆನೆಂತು ತವ ಅದ್ಭುತ ಚರಿತೆಯ ಪ್ರಭುವೇ ! ||ನಿ||

ನೀನಿರಬಹುದು ರಾಮ ನೀನಿರಬಹುದು ವಿಷ್ಣು
ನೀನಿರಬಹುದು ಶಿವ ಎನೆ ಲೋಪವಿಲ್ಲ ಪ್ರಭುವೇ ! ||ನಿ||

ನೀನು ಯಾರಾದರೂ ಆಗಿರು ಎಂತಾದರೂ ಇರು
ನೀನಂತೂ ದೇವಾಧಿದೇವ ಎಂಬೆ ಪ್ರಭುವೇ ! ||ನಿ||

— ೦ —

# ಹೇ ದೇವ ಪರಮು....

ಹೇ ದೇವ ಪರಮು ಕರುಣಾಸಿಂಧು
ನಿನ್ನ ಮರೆತು ನಾ ಹಾದಿ ತಪ್ಪಿದೆನೈ.
ಕೈಮುಗಿದು ಎಡೆವಿಡದೆ ಬೇಡುವೆನು
ನಿನ್ನರಮನೆಯ ಪರಿಚಾರಿಕೆಗೈಯೆನ್ನ
ಪರಮಾನಂದ ಪುರುಷೋತ್ತಮನೇ !

ಎನ್ನ ಬಡಬಾಳಿನ ಗೋಳಿನಲಿ
ತಿರಸ್ಕರಿಪರೆ ಎಲ್ಲ, ನಾಗೈವ
ಅನನ್ಯ ಸೇವೆಗಿನಿತು ಬೆಲೆಯಿಲ್ಲ
ನಿಂದೆಯಿಂದ ನೊಂದು ಬಳಲಿದೆನಯ್ಯ
ನೀನೇ ದಯೆದೋರು ಹೇ ಪ್ರಭುವೇ ||ಹೇ||

ಒಡಲ ಕುಡಿಗಳಿಗಿನಿತಿಲ್ಲವಿಂದು
ಕರುಣೆ ಬಡ ಜನನಿಯ ಮೇಲೆ
ಅಕ್ಕರೆಯ ಸಕ್ಕರೆಯುಮಿಲ್ಲ
ಪ್ರೇಮದ ಸವಿಯ ಸಿಹಿಯಿಲ್ಲ
ನೀನಡೆಸೆನ್ನನು ನಿನ್ನ ಚಿರ ಬೀಡಿಗೆ
ಶ್ರೀ ಪರಮಾತ್ಮನೇ ! ||ಹೇ||

— ೦ —

# ದಾಹ ದಾಹ....

ದಾಹ ದಾಹ ತೀರದ ದಾಹವದು
ಸುಡುತಿದೆ ಎನ್ನನು ಶ್ರೀಪರಮಾತ್ಮನೇ !

ಎಲ್ಲೆಯಿಲ್ಲದ ಭಾಷೆಯಲಿ ನಿನ್ನ ಪರಿಜ್ಞಾನ
ಎಲ್ಲೆಯಿಲ್ಲದ ಘೋರ ಹಸಿವಿನಲಿ ನನ್ನ ಬಾಳು
ತಾಳಲಾರೆ ದಾಹ ಹಸಿವೆಗಳ ರಣಗೋಳು.

ಅಂದು ನೀನಿದ್ದೆ ಎನ್ನ ಹೃದಯ ಧಾತ್ರಿಯಲಿ
ನೀನೆಂತು ಕೈಬಿಟ್ಟೆ ? ನಾನರಿಯೆ ದೇವ !
ಬಲವಂದು ಹೊರಗುಳಿಯಲೇಂ ಕಾರಣ ಪೇಳ್ ?

ಅನಂತವ್ಯಾಪಿ ವಿಶ್ವವೇದನೆಯೇ ! ಸಮಸ್ತ
ವಿಶ್ವಕಾವ್ಯವನು ಕೊರೆಕೊರೆದು ವಿರಚಿಸಿದೆ,
ಈ ಮಹಾವೇದನೆಯನು ನನ್ನ ನಿನ್ನೊಳಗೆ
ವಿಭಾಗಿಸಿ ಭೋಗಿಸುವ ಓ ಪ್ರಭುವೇ

— o —

# ಎನಿತುದಿನ ಎದುರು....

ಎನಿತುದಿನ ಎದುರು ನೋಡಲಿ ನಾನಿನ್ನ ಪ್ರಭುವೇ ?
ನಿನ್ನನುಳಿದು ಬಾಳ್ವೆನೆ ಈ ಭವಸಾಗರದಲಿ ?
ಪಾಹಿಮಾಂ ಪಾಹಿಮಾಂ

ರಾಗವಳಿದ ವೀಣೆಯಂತೆ ನುಡಿಯು ಬಡತನದಿಂದೆ
ಭಾವಧಾರೆ ಹೊಮ್ಮಲರಿಯದೆ ತೊಳಲುತಿರುವೆ
ಪಾಹಿಮಾಂ ಪಾಹಿಮಾಂ ||೨||

ಮೂಕ ಮೌನಿಯಾದ ಸುಜ್ಞಾನಿಯಂತೆ ಬದುಕೆನ್ನ
ಭವದ ಕೋಳ್ಕೆಸರಲಿ ಹೊರಳಿ ನರಳಿ ನಲುಗುತಿದೆ
ಪಾಹಿಮಾಂ ಪಾಹಿಮಾಂ ||೨||

ಬಲೆಗೆ ಬಿದ್ದ ಮೀನಿನಂತೆ ಗೋಳಾಡುತಿಹೆ ನಾನು
ಚಿಂತನಾವೇಶ ಕುಗ್ಗಿ ತಿರೆಗೆ ಭಾರವಾದೆನು ಬದುಕಿ
ಪಾಹಿಮಾಂ ಪಾಹಿಮಾಂ ||೨||

ಬರಿ ಜಡಗತಿಯಲಿ ಸಂದು ಹೋದುದೆನ್ನ ದಿನಮಾನ
ನೊಂದು ನೋಯಲಾರೆ ಒಳಹೊರಗೆ ಗೆಯ್ಯಲಾರೆ
ಪಾಹಿಮಾಂ ಪಾಹಿಮಾಂ ||೨||

— o —

# ಒಡೆಯ....

ಒಡೆಯ ನೀನೆಂದರಿತರಿತು ನಿನ್ನ
ಧ್ಯಾನಿಸದೆ ಮರುಳನಾದೆನು ನಾನು
ಪಾಹಿಮಾಂ ಪರಿ ಪಾಹಿಮಾಂ

ಮಾಯಾ ಶಕುತಿಯದು ಶರೀರದಲಿ
ಅಡಗಿರಲು ನಿಜಮುಕುತಿ ದಾತನು ನೀನು
ನಿನ್ನ ಸಮಾನರಿನ್ನುಂಟೆ ? ನೀನೇ
ಕೈವಿಟ್ಟರಾರು ಗತಿ ಪೇಳೆನಗೆ
ಪಾಹಿಮಾಂ ಪರಿ ಪಾಹಿಮಾಂ ||ಒ||

ನಿನ್ನ ಸೂತ್ರದೊಳಾಡುವುವು ಸಕಲ
ಚರಾಚರಗಳೆಲ್ಲವು ನಿಯಮದಲಿ
ನೀನೇ ಎಲ್ಲಕು ಸೂತ್ರದಾರನೆನೆ
ನಮಗೆಲ್ಲಿಯ ಸ್ವತಂತ್ರ ತಪ್ಪುಗೈಯೆ
ಪಾಹಿಮಾಂ ಪರಿ ಪಾಹಿಮಾಂ ||ಒ||

— ೦ —

# ಬಾಳಿನ ಅಪಸವ್ಯಾಲ್ಯ....

ಬಾಳಿನ ಅಪಸವ್ಯಾಲ್ಯವೆನ್ನ  ಕಡೆಗಣಿಸಿ
ತಳ್ಳುತಿರೆ ಆಳಕೆ ನಿಷ್ಕರುಣೆ ಘನಿಸಿ
ನಿನ್ನನಲ್ಲದಾರ ಬೇಡಲಿ ಪ್ರಭುವೇ !

ಯಾದವ ಕುಲತಿಲಕ ಪರಮಾನಂದ
ಗೋವಿಂದ ಶ್ರೀಮುಕುಂದ ಮುರಾರಿ !
ಆಲಿಸೆನ್ನ ಮೊರೆಯ ನೀ ಮನಗೊಟ್ಟು
ಗತಿಹೀನರಿಗಾರು ನೀನೇ ಗತಿಕಣ
ಕನಿಕರಿಸಿ ಕೊಡು ಸದ್ಗತಿಯ ಹರಿಯೆ !

ಧಾರುಣಿಗೆ ವರಚಕ್ರವರ್ತಿಯೆನಿಸಿ
ಮರೆವರೆ ನಿಮ್ಮಾಧೀನ ಪ್ರಜೆಗಳನು ?
ನೀ ಗೈದುಪಕಾರವನು ಮರೆಯೆನು
ಪರಮ ಕರುಣಾ ಸಿಂಧು ಬಂದೆನ್ನ
ಬಂಧನದಿಂದಲಿ ಬಿಡಿಸಯ್ಯ ಪ್ರಭುವೇ !

— o —

# ಭಜಿಸು ಭಜಿಸು....

ಭಜಿಸು ಭಜಿಸು ಮನವೇ ಅನುಗಾಲವು
ಭಜಿಸು ಶ್ರೀಕೃಷ್ಣ ನಾಮಾವಳಿಯ
ಭಜಿಸು ಮನವೇ ಭಜಿಸು.

ದುರಿತ ಕೋಟಿಯ ಅರೆದು ದೀನರನು
ಉದ್ಧರಿಸುವ ಪರಿಪುಣ್ಯ ಪುರುಷನ
ಮರೆಯದೆ ಸ್ಮರಿಸಿದೊಡಿರದು ನರಕ
ಭಜಿಸು ಮನವೇ ಭಜಿಸು. ||ಭ||

ತ್ರಿಲೋಕ ಪೂಜಿತ ಮುನಿಗಣ ವಂದಿತ
ದೇವಕೀನಂದ ಶ್ರೀಗೋವಿಂದ
ಗೋಪಾಲ ಕೃಷ್ಣನ ಶುಭ ಚರಿತವ
ಭಜಿಸು ಮನವೇ ಭಜಿಸು. ||ಭ||

ದೀನ ರಕ್ಷಕ ದಾನವಾಂತಕ ಕರುಣಾ
ಸಾಗರನ ಪದಾಬ್ಜಗಳ ಸೇವೆಯಲಿ
ಪಾಪವನು ಪರಿಹರಿಸಿ ಸುಖಿಯಾಗೆ
ಭಜಿಸು ಮನವೇ ಭಜಿಸು. ||ಭ||

— o —

# ಕೀಲು ಕೀಲುಗಳಲಿ....

ಕೀಲು ಕೀಲುಗಳಲಿ ಕಡುನೋವಿನಾಗರವೊತ್ತಿ
ಹಿಂಡುತಿದೆ ಪ್ರಾಣವನು ಕಂಡುಕಂಡು ನೀ ಎನ್ನ
ಕೈ ಬಿಡುವರೆ ಗೋವಿಂದ ಮುದ್ದುಕಂದ ಮುಕುಂದ ?

ವಿರಾಟ್ ವಿಶ್ವಕೆ ಪತಿಯಾದವನಿಗೆ ಎನ್ನೊಂದು
ಕಿರು ಭಂಗವನು ಬಗೆಹರಿಸಲಾಗದೇ ಪ್ರಭುವೇ ?
ನಿನ್ನ ನೆರೆ ನಂಬಿ ಬೇಡುತಿಹೆ ಭಯ ಭಕ್ತಿಯಿಂದ ||ಕೀ||

ಭವರೋಗದಲಿ ಬೆಂದು ಬೇವಾಗಿ ಎಷ್ಟೆಷ್ಟು
ಮಾಡಿದರಷ್ಟು ಬಗೆಹರಿಯದ ಗುಣದೋಷವಿರೆ
ಏಂಗೈಯ್ಯಲು ಅರಿಯೆ ಪರಮಾತ್ಮ ನೀ ಪೊರೆಯೈ ||ಕೀ||

— ० —

# ಪರಮ ಪವಿತ್ರ....

ಪರಮ ಪವಿತ್ರ ಧಾರಿಣಿಯಲಿ ನರಜನುಮವೆತ್ತಿ
ಬದುಕಿಯೂ ಫಲವಿಲ್ಲ, ಸುಧರ್ಮದ ಅರಿವಿಲ್ಲ,
ಜ್ಞಾನದ ಬೆಳಕಿಲ್ಲ, ಕತ್ತಲೆ ಕೋಟೆಯಿದು ಶ್ರೀಹರಿಯೆ !

ನೀನೇ ಎಳೆತಂದೆನ್ನ ತಳ್ಳಿದೆ ಈ ಧಾರಿಣಿಯ ಭವ
ಸಾಗರಕೆ. ನೀನಿತ್ತ ಶಿಕ್ಷೆಯ ಸೆರೆಯಲಿ ಸಿಲ್ಕಿ
ನರಳುವೆ ಭವಧಿಯ ದಾಂಟಲರಿಯದೆ ಶ್ರೀ ಹರಿಯೇ ! ||ಪ||

ಪಾಪ ಪಂಕದಲಿ ಮುಳುಗಿ ನಿನ್ನ ಮರೆವರೆ ಶ್ರೀಹರಿಯೆ ?
ನೀನಿತ್ತ ಭಂಗದಲಿ ನೆನೆವೆ ನಿನ್ನ ಎಡೆಬಿಡದ ಪರಿಯೊಳ್
ಕಣ್ತೆರೆದು ನೋಡು ಪರಮ ದೀನೆಯನ್ನ ಶ್ರೀಹರಿಯೆ ! ||ಪ||

— ೦ —

# ದೀನರಕ್ಷಕನೆಂಬರು....

ದೀನ ರಕ್ಷಕನೆಂಬರು ನಿನ್ನ ದೇವ
ತ್ರಿಗುಣಾತೀತ ಲೋಕ ವಂದಿತನೆ !

ದುಃಖಭಾರದಲಿ ನರಳುತಿಹೆ ದೊರೆಯೆ
ಬಂದು ಪೊರೆಯೊ ಕರುಣಾರಸ ಸೂಸಿ. ||ದಿ||

ಪುರಾಣ ಪುಣ್ಯ ಪುರುಷ ಪರಮಾತ್ಮ
ಕರುಣೆಯಿಂದಲಿ ಕಾಯೆನ್ನ ಜೀವೇಶನೆ ! ||ದಿ||

ಪಾಪ ಕೂಪದ ಕಗ್ಗಾಡಿನಲೆದಲೆದು
ಮುಂಗಾಣದಿಹೆ ಮುನ್ನಡೆಸು ಹರಿಯೆ ! ||ದಿ||

ಭಜಿಸುವೆನು ಭಜಿಸುವೆನು ಭಜಿಸುವೆನು
ಮನತುಂಬಿ ತನು ತುಂಬಿ ಜೀವೇಶನೇ ! ||ದಿ||

ಕರುಣೆ ದೋರು ಎನಗೆ ಪರಮ ದಯಾಸಾಗರ
ನಿನ್ನ ನಂಬಿ ಮುಕ್ತಿಯ ಕೋರುವೆ ಹರಿಯೆ ! ||ದಿ||

— o —

## ನೆರಳು ನೀಡಿದರ....

ನೆರಳು ನೀಡಿದರ ಮನೆವಾಗಿಲಲಿ
ನಾಯಿ ಕುನ್ನಿಯಂತೆ ಕಾವಲಿರುತೆ
ಕಳೆದೆನೆನ್ನ ಜೀವಮಾನವ ಪ್ರಭುವೇ !

ನಿನ್ನನ್ನೆ ಮರೆತೆ ನಿನ್ನ ಸೃಷ್ಟಿಯ
ಮಹಾ ಪರಿಧಿಯನ್ನೆ ಮರೆತೆ. ಕಾಲ
ಪ್ರಜ್ಞೆಯರಿವಿಲ್ಲದೆ ಕಳೆದೆನಯ್ಯ
ಪರಮಾರ್ಥವ ವ್ಯರ್ಥ ಸಂಕಟದಿಂದ
ಉದ್ಧರಿಸೆನ್ನ ದೇವಾಧಿದೇವ ! ||ನೆ||

ವಿದ್ಯೆಯಿಲ್ಲ ಬುದ್ಧಿಯ ಗಂಧವಿಲ್ಲ
ಇನ್ನೆಂತು ಸುಸುಂದರ ಜೀವನಾ ?
ಹಗ್ಗ ಹರಿದ ಗೂಳಿಯವೊಲಾಯ್ತು
ಸ್ವಚ್ಛಂದ ಮನಮತಿಗಳ ಭಾವನಾ
ಉದ್ಧರಿಸೆನ್ನ ದೇವಾಧಿದೇವಾ ! ||ನೆ||

ಅರಿಯದಾದೆನೆನ್ನಯ ನೆಲೆಬೆಲೆಯ
ಮತಿಗೆಟ್ಟು ಗತಿಗೆಟ್ಟು ಮನುಕುಲವೆ
ಕೆಟ್ಟು ನರಳಿದೆ ದುಃಖದಲಿ ಮುಳುಗಿ
ತಂದೆ, ಶ್ರೀಪತಿಯೆ ನೀನೆ ಬಂದು
ಉದ್ಧರಿಸೆನ್ನ ದೇವಾಧಿದೇವಾ ! ||ನೆ||

— ೦ —

# ಹರಿಯೆ ನಿನ್ನ....

ಹರಿಯೆ, ನಿನ್ನ ಭಜನೆಯ ರಾಗರಸವನು ಕಾಣೆ
ಸಾರವಿಲ್ಲದ ಬದುಕಿನ ಜಂಜಡ ಸಾಕೆನಗೆ.

ಶ್ರೀ ಪತಿಯೆ ! ದೀನಾತಿದೀನರೊಡೆಯ ನೀನೆನ್ನ
ಕೈಬಿಡದಿರು ಕಗ್ಗತ್ತಲೆ ತುಂಬಿದಟವಿಯಲಿ.
ನಿನ್ನ ಸೇವೆಯದಲ್ಲದೇನನುಂ ಬಯಸೆ ನಾಂ
ಸಾರವಿಲ್ಲದ ಬದುಕಿನ ಜಂಜಡ ಸಾಕೆನಗೆ. ||ಹ||

ಲೋಕವಿದು ದೀನರಂ ತತ್ತಳ ತುಳಿದಳಿಸುವ
ನಿಷ್ಕರುಣೆಯ ದುರ್ಮ್ಮಾನ ದುರಂಕಾರಗಳ ಕೋಟೆ
ಎನಲೆಲ್ಲಿಯ ಶಾಂತಿ ಸಮಾಧಾನವೊ ಪ್ರಭುವೇ !
ಸಾರವಿಲ್ಲದ ಬದುಕಿನ ಜಂಜಡ ಸಾಕೆನಗೆ. ||ಹ||

ಎನ್ನಂಥ ದೀನರಿಗೆ ಕರುಣೆ ತೋರುವರಾರು ?
ದಯಾಘನನಾದ ನೀನೆ ದಯ ತೋರ್ರ್ವುದಲ್ಲದೆ
ಬೇರಾರೆನಗೆ ಈ ಭವಸಾಗರದಲಿ ಪ್ರಭುವೇ !
ಸಾರವಿಲ್ಲದ ಬದುಕಿನ ಜಂಜಡ ಸಾಕೆನಗೆ ||ಹ||

— o —

# ನಿನ್ನಡಿಯು....

ನಿನ್ನಡಿಯು ಧೂಳಿಯಲಿ ಹೊರಳಾಡುವ
ನನ್ನನು ಶಿಶುವೆನ್ನು, ದಾಸಿಯೆನ್ನು
ಏನಾದರೂ ಅನ್ನು ನನ್ನೆಡೆಯಲಿ ನಿನಗೆ
ಎಲ್ಲಿಯ ಸಂಕೋಚವೋ ಸ್ವಾಮಿ ?

ನಿನ್ನೆಲ್ಲ ವ್ಯಥೆಗಳ ಪರಮ ವ್ಯಥಿಯಾಗಿ
ದೀನ ಮತಿಗತಿಯ ಪಾಮರ ಭಕ್ತೆಯಾಗಿ
ಸ್ವೀಕರಿಸಿ ಜೀವನೋದ್ಧಾರ ಮಾಡೈ
ಹೇ ಎನ್ನ ವಿಶ್ವ ಬಂಧು ಪರಮಾತ್ಮನೇ !

ನೀನು ನಿದ್ರಿಸದಿಹೆ, ನಿನ್ನ ಕಣ್ಣಿನಲಿ
ನಿದ್ದೆಯ ಸುಳಿವಿಲ್ಲ, ನನಗೇಕೆ ನಿದ್ರೆಯೋ ?
ವಿಶ್ವ ಬ್ರಹ್ಮಾಂಡವು ನಿನ್ನ ವಿರಾಟ್‌ಗೇಹ
ನಾನು ವಿಶ್ವಕಾಂಡದಲಿ ಲೀನ ಪ್ರಭುವೇ !

ನಿನ್ನ ಸಕಲ ಧರ್ಮಕರ್ಮ ಭಾರದಲಿ
ಸರ್ವತ್ರ ಭಾಗಿಯಾಗಿ ನೋವಿನ ಪರಿಯಲಿ
ಮುಳುಗಿ ನೋವಿನಲಿ ಉತ್ತೀರ್ಣಳಾಗುವೆ
ಪರಾಮರಿಸೈ ಹೇ ವಿಶ್ವ ಬಂಧು ಪ್ರಭುವೇ

— o —

# ಮಾಧವ ಕೃಷ್ಣಾ....

ಮಾಧವ ಕೃಷ್ಣಾ ರಾಧಾ ಕೃಷ್ಣಾ ಎನಬಾರದೇ ?
ನಿತ್ಯ ಧರ್ಮಕರ್ಮದಲಿ ಮುಳುಗಿ ನಮ್ಮ ಮುದ್ದು
ಕೃಷ್ಣನ ನೆನೆದು ಭವರೋಗ ಹರಿಸಬಾರದೇ ?

ಹಲವು ಹತ್ತು ಬಗೆಯಲಿ ಬಾಲಲೀಲೆಯಾಡಿದ
ಲೋಕ ಚರಿತನ ನೆನೆದು ಪುನೀತರಾಗಬಾರದೇ ?
ನಂದ ನಂದನ ಯಶೋದೆ ಕಂದನ ಪುರಿಪುಣ್ಯ
ಮೂರುತಿಯ ನೆನೆನೆನೆದು ಪುಣ್ಯಗಳಿಸಬಾರದೇ ? ||ಮಾ||

ಭಾರತ ಜನನಿಯ ಔರಸ ಪುತ್ರನ ಮೋಹನ
ಚಂದಿರನ ನೆನೆನೆನೆದು ಮುಕ್ತಿ ಪಡೆಯಬಾರದೇ ?
ಮನಃಕ್ಲೇಶವ ತೊಳೆದು ಪದುಮನಾಭನ ಪರಮ
ಕೃಪಾ ಸಾಗರದಲಿ ಮುಳುಗಿ ಧನ್ಯರಾಗಬಾರದೇ ? ||ಮಾ||

— ೦ —

# ಯಮುನೆಯ....

ಯಮುನೆಯ ತೀರದಲಿ ಪೊಂಗೊಳಲನೂದುತಿಹ
ಬಾಲ ಮುಕುಂದನ ನೋಡಲು ಹೋಗುವ ಬಾರೆ ಸಖಿ !

ತೀರದಂಚಿನಲಿ ಆನಂದದಿಂದ ಕೊಳಲೂದುವ
ರಾಯಗೋವಳನ ಕಣ್ತುಂಬ ನೋಡಿ ಸಂತಸ
ದೈಸಿರಿಯಲಿ ಮೆರೆಯಲು ಹೋಗುವ ಬಾರೆ ಸಖೀ ! ||ಯ||

ಗೋವುಗಳು ಹಸುರುಣದೆ ಆಲೈಸುತಿವೆ ರಂಗನ
ಗೀತಗಾನವ ಮೆಚ್ಚಿ, ಬೃಂದಾವನದೊಳ್ ಚದುರ
ಗೋಪಾಲನ ನೋಡಲು ಹೋಗುವ ಬಾರೆ ಸಖೀ ! ||ಯ||

ಕವಿಯ ಕಣ್ಮನದ ಪುಣ್ಯಫನಿಸಲುರೆ ಬಾಲನ
ಪೊಂಗೊಳಲಿಂದುಣ್ಮುತಿಹ ಕಮನೀಯ ರಾಗ
ಮಾಲೆಯನಾಲೈಸಲು ಹೋಗುವ ಬಾರೆ ಸಖೀ ! ||ಯ||

— o —

# ನಮ್ಮ ರಂಗ....

ನಮ್ಮ ರಂಗ ವಿಠಲನ ದಿವ್ಯದರುಶನಕೆಂದು
ಹೋಗೋಣ ಬನ್ನಿರೋ, ನಾವು ಹೋಗೋಣ ಬನ್ನಿರೋ !

ತೆರೆದಿದೆ ಗುಡಿಯ ಬಾಗಿಲು. ನಡೆದಿದೆ ವರಪೂಜೆ
ಘಮಘಮಿಸುವ ಮಲ್ಲಿಗೆ ಹಾರವ ಕೊರಳಿಗಿಟ್ಟು
ಆನಂದದಿಂದಲಿ ನಮಿಸಿ ಭಜಿಸೋಣ ಬನ್ನಿರೋ ! ||ನ||

ಭವ ಬಂಧನವ ಹರಿಸಿ ಭಂಗ ಬನ್ನವ ತೊಡೆವ
ಪರಮ ಮುದ್ದುರಂಗ ವಿಠಲನ ಲೋಕೋತ್ತರ
ದರುಶನವ ಪಡೆಯಲು ನಾವು ಹೋಗೋಣ ಬನ್ನಿರೊ ! ||ನ||

ಭಾರತಿಯ ಔರಸ ಪುತ್ರನಾಗಿ ಸಂಭವಿಸಿದ
ಸಚ್ಚಾರಿತ್ರ್ಯ ಘನಮಹಿಮನ ಬಲ್ಮೆಯಿಂದ
ವಂದಿಸಿ ಪೂಜಿಸಿ ನಲಿಯೋಣ ಬನ್ನಿರೋ ! ||ನ||

— o —

# ಜಯ ಜಯ ಗೋವಿಂದ....

ಜಯ ಜಯ ಗೋವಿಂದ ಶ್ರೀಹರೇ !
ಜಯ ಜಯ ಪರಮಾತ್ಮ ಶ್ರೀಹರೇ !

ದೇವ ನಿನ್ನ ಬೇಡುವೆನು ಕೈಮುಗಿದು
ಕೇಳೆನ್ನ ಕಿರುಮೊರೆಯನು ಕಿವಿಗೊಟ್ಟು
ನಿನ್ನ ಭಜಿಸುವೆ ಅನುಗಾಲವು ಶ್ರೀಹರೆ ! ||ಜ||

ಕಡು ಸಂಕಟ ಭಾರದ ಕರ್ವೋಡವೆನ್ನ
ಹೃದಯಧಾತ್ರಿ, ಕುಸಿವುದು ನಿನ್ನಯ
ಪಾದಗಳ ಬಳಿಯಲಿ ಭರಿಸು ಶ್ರೀಹರೇ ! ||ಜ||

ವರ ಕರುಣಾಳು ಜಗಧೀಶ್ವರನೇ
ಕಾಲ್ವಿಡಿದು ಬೇಡುವೆನೋ ದಯಾಘನ
ಕರುಣದಿಂದಲಿ ಉದ್ಧರಿಸು ಶ್ರೀಹರೇ ! ||ಜ||

— o —

# ಮುರಳಿಗಾನ....

ಮುರಳಿ ಗಾನಲೀಲಾ ವಿನೋದನ
ಆನಂದದಿಂದ ಕೂಡಿ ನಲಿದಾಡಿ
ನಾವು ಮುದಗೊಳ್ಳುವ ಬಾರೆ ಸಖೀ !

ಹೂವಿನ ಹಾರಗಳ ಕೊಂಡೊಯ್ದು
ಕೊರಳಿಗಿಕ್ಕಿ ನಲ್ಮೆಯಲಿ ಮುದ್ದಿಸಿ
ಆನಂದಗೊಳ್ಳುವಾ ಬಾರೆ ಸಖೀ ! ||ಮು||

ದಧಿಕ್ಷೀರವನೊಯ್ದು ಕೊಟ್ಟು ವಿಠಲನ
ಕಣ್ಣಾರೆ ಕಾಣುವ ಸುಯೋಗ ಪಡೆಯುವ
ಪಂಚದಳಾಯತಾಕ್ಷಿ ಬಾಬಾರೆ ಸಖೀ ! ||ಮು||

ಬೆಣ್ಣೆಯ ಮಿಳ್ಳೆಯನೊಯ್ದು ಚಂದದಿಂದ ನೀಡಿ
ಮನವಾರೆ ನೋಡಿ ಮಾತಾಡಿ ಕುಣಿದಾಡಿ
ಆನಂದವ ಪಡೆದು ಧನ್ಯರಾಗುವ ಬಾರೆ ಸಖಿ. ||ಮು||

— ೦ —

# ಮನವೆಂಬ....

ಮನವೆಂಬ ಮರ್ಕಟವದು ಇದ್ದೆಡೆ ಇರಲೀಯದೆ
ಕಾಡುತಿಹುದೆನ್ನನು ಹೇಸುಗತಿಯಲಿ ತಳ್ಳಿ.
ನಿನ್ನ ಧ್ಯಾನಿಸಲರಿಯೆ ಸ್ಮರಿಸಿ ವಂದಿಸಲರಿಯೆ
ದಿವ್ಯ ಮುಕ್ತಿ ಪಥವ ಹಿಡಿಯಲರಿಯೆ ಶ್ರೀಹರಿಯೆ. !

ದಿನನಿತ್ಯ ವಿಷಯ ಕೇಳಿಯಲಿ ಮುಳುಗಿಸುತೆನ್ನ
ನಿನ್ನ ಮಂಗಳ ವದನಾರವಿಂದಕೆ ಮುಸುಗಿಡುವರೆ ತಂದೆ !
ನೀನೇ ಕಡೆಗಣಿಸಿ ಕೈಬಿಡಲುರೆ ನೆನೆವೆನೆಂತು ನಿನ್ನ
ಜೀವಮಾನವ ವ್ಯರ್ಥ ಕಳೆದೆನಲ್ಲಾ ಶ್ರೀಹರಿಯೆ ! ||ಮ||

ದುರ್ಮ್ಯಾನ ದುರಾಸೆಗಳು ಕಾಡುತಿವೆ ಎನ್ನನು
ಮುಂಗಾಣದೊಲ್ ಮತಿಗೆಡಿಸಿ ಪರಮಾತ್ಮನೇ !
ನಿನ್ನ ಧ್ಯಾನಿಸದ ಪರಿಯಲಿ ಕೊರಳೊತ್ತುತಿಹುದೆನ್ನ
ನೀನೇ ಈಗ ಮುಕ್ತಿಪಥವ ತೋರಿ ರಕ್ಷಿಸು ಹರಿಯೆ ! ||ಮ||

— o —

# ಚಿದಾನಂದನೆ....

ಚಿದಾನಂದನೆ ಚಿನ್ಮಯ ರೂಪನೆ
ಮುಂದ್ಸು ಗೋಪಾಲಕೃಷ್ಣನೆ ನಿನಗೆ
ಪರಮವಂದನೆ.

ಬ್ರಹ್ಮಾಂಡ ಪೂಜಿತ ತ್ರಿಲೋಕವಂದಿತ
ಪರಮ ವೈರಾಗ್ಯಸಿಧಿಯೆ ಬಾರಯ್ಯ
ಧಿಮಿಧಿಮಿ ಹೆಜ್ಜೆಯಿಡುತಲೆನ್ನ ಬೀಡಿಗೆ ||ಚಿ||

ನಿನ್ನನೆತ್ತಿ ಮುದ್ದಾಡಿ ತಣಿಯುವೆ
ದಗ್ಧ ಹೃದಯ ಕುಂಡಕೆ ಅಮೃತ
ಬಿಂದುವ ಸೂಸು ಹೇ ಪರಮಾತ್ಮನೇ ! ||ಚಿ||

ಭವಧಿಯೊಳ್ ಪೆಣ್ಣೆಂದು ಕೀಳುಗೈವ
ಜನಗಣದಿಂದೆ ಗೌರವ ಇನಿತಿಲ್ಲವು.
ನೀನೆನ್ನ ಉದ್ಧರಿಸು ಪರಮಾತ್ಮನೇ
ಸೆರಗೊಡ್ಡಿ ಬೇಡುವೆ. ||ಚಿ||

— ೦ —

# ಜಯ ಗೋವಿಂದ....

ಜಯಗೋವಿಂದ ಜಯಜನಾರ್ದನ ಎನುಮನವೇ
ಜಯ ಪರಮಾನಂದ ಜಯ ದೇವಕೀ ಕಂದ ಎನುಮನವೇ.

ದಯದೋರಿ ದೀನನೊರೆಯ ಲಾಲಿಸು ಶ್ರೀ ಹರಿಯೆ !
ತ್ರಿಲೋಕ ದಾತಾ ಸಕಲ ಜನ ಸಂಸೇವಿತಾ
ನಮಿಸುವೆನೋ ಚಂದದಿಂದ ಪರಿಪಾಹಿಮಾಂ ||ಜ||

ನಿನ್ನೆ ಕಳೆಯಿತು. ನಾಳೆಯಿನ್ನು ಬರಲಿಲ್ಲವು.
ಇಂದಿನೀ ಚಣವಿದೆನ್ನದು ನಿನ್ನ ನಮಿಸೆ ಹರಿಯೆ.
ಎನ್ನ ನಮನವ ತೀರಸ್ಕರಿಸದೆ ಪರಿಪಾಹಿಮಾಂ. ||ಜ||

ನಿನ್ನ ಪರಿಪುಣ್ಯ ನಾಮವನು ಬಾರಿಬಾರಿಗೂ
ಸ್ಮರಿಸುವೆ ಹೇ ಪರಮ ಕರುಣಾ ಸಿಂಧು ಎನ್ನ
ನಡು ನೀರಿನೊಳ್ ಕೈಬಿಡದೆ ಪರಿಪಾಹಿಮಾಂ ||ಜ||

— o —

# ಜಯ ಜಗಧೀಶ....

ಜಯ ಜಗದೀಶ ಹರೆ ! ಜಯ ಪರಮಾತ್ಮ ಹರೆ !
ಜಯ ವಿಠಲ ಹರೇ ! ಜಯ ಘನಶ್ಯಾಮ ಹರೆ !

ಈ ನಶ್ವರ ಜೀವನವ ನಂಬಿ ಕಡುಕೆಟ್ಟಿನೈ
ನಿನ್ನಿರುವ ಮರೆತು ಮೆರೆದೆ ಒಳಗಣ್ ಮುಚ್ಚಿ
ಈಗ ಕಣ್ತೆರೆದರೆ ಜಗವೆಲ್ಲ ಕತ್ತಲೆಯ ಬೀಡು
ಏನೊಂದು ಕಾಣಲಾರೆನೋ ಪರಮಾತ್ಮನೇ ! ||ಜ||

ಮಾನವ ಜನುಮವೆತ್ತಿ ಮಾನವೀಯತೆಯ
ಮರೆತು ಜೀವನ ಮೌಲ್ಯಮಂ ಅರಿಯದಾದೆ
ಈ ಜೀವನವ ಕೊಟ್ಟವ ನೀನೆ ಮತಿಗೆಡಿಸಿ
ಪಾಳ್ಗೆಡಿಸಿದವ ನೀನೇ ! ಏಂಗೈಯಲಿದೇವ ? ||ಜ||

ಸುಖಸಂತೋಷಗಳ ಗರ್ವವಿತ್ತವ ನೀನೇ
ಭಂಗ ಬನ್ನವಿತ್ತವ ನೀನೇ ಗುರಿಯ ನೆಲೆ
ತಪ್ಪಿಸಿದವ ನೀನೇ ಎನಲಿನ್ನೇನು ?
ನಿನ್ನ ದಾಸಿಯ ನೀನೇ ಉದ್ಧರಿಸು ಸ್ವಾಮಿ ! ||ಜ||

— o —

(ನಾದ ಬಿಂದುವಿನಿಂದ)

# ಕೃಷ್ಣ ಬಾರೋ....

ಕೃಷ್ಣ ಬಾರೋ ಶ್ರೀಕೃಷ್ಣ ಬಾರೋ
ಕಂದರ್ಪನಯ್ಯನೇ ನೀ ಬಾರೋ

ಕರ್ಣಕುಂಡಲವ ತೊಟ್ಟು ಜಗಜಗಿಪ ಕಿರೀಟವ
ನಿಟ್ಟು ನಗೆ ಮಲ್ಲಿಗೆಯ ಬೆಳಗುತ ಬಾರೋ ||ಕೃ||

ಚಿನ್ನಚೀನಾಂಬರವುಟ್ಟು ಗೆಜ್ಜೆಪಾಡಗ ತೊಟ್ಟು
ಧಿಮಿಧಿಮಿ ಕುಣಿಯುತ ಬಿಸಜಾಕ್ಷ ನೀ ಬಾರೋ ||ಕೃ||

ಕಣ್ಣಿಗೆ ಕಾಣಿಗೆಯಿಟ್ಟು ಕೊರಳಹಾರವ ತೊಟ್ಟು
ಪೊಳೆವಾ ಕಸ್ತೂರಿ ತಿಲಕದೊಡನೆ ನೀ ಬಾರೋ ||ಕೃ||

— ೦ —

ಭಜಿಸು ಮನವೇ ತ್ರಿಲೋಕನಂದಿತ ಶ್ರೀಹರಿಯ
ಭಜಿಸು ಭಜಿಸು ಅನುಗಾಲವು ಭಜಿಸು ಪರಮಪುರುಷ
ಶ್ರೀ ಇಂದಿರಾರಮಣ ದೇವಕೀನಂದನನ

ಭಜಿಸು ನಿತ್ಯನಿರಂತರ ಮನತಣಿಯುವ ತೆರದಿ
ವೇದಶಾಸ್ತ್ರಗಳ ಪುರಾಣ ಪುಣ್ಯದ ಹಾದಿಯನು
ನಾನರಿಯೆ ಭಜಿಸು ಮನತುಂಬಿ ಕೋಡಿವರಿವನ್ನ ||ಭ||

ಭಜಿಸು ಭಜಿಸು ಸುಗುಣ ಸಚ್ಚಾರಿತ್ರ್ಯ ಪರಿಪುಣ್ಯನ
ಅಮಿತ ವೀರವಿಕ್ರಮ ನಿಗಮತತಿ ಸಂಪೂಜಿತ
ವಾಸುಕಿ ಶಯನ ಸರ್ವೇತ ಶ್ರೀನಂದ ಕಂದನ ||ಭ||

— o —

# ದೇವಾದಿದೇವ....

ದೇವಾಧಿದೇವ ತ್ರಿಲೋಕಭರಿತ ವಸುದೇವಸುತ
ವಿರಾಟ್ ಬ್ರಹ್ಮಾಂಡನಾಯಕ ನಿಖಿಲಗುಣಭರಿತ
ಮುನಿಜನವಂದಿತ ಅಸುರವಿರೋಧಿ ಪರಿಪಾಹಿಮಾಂ

ಭಕ್ತಪರಾಧೀನ ಸಕಲದುರಿತ ನಿವಾರಣ ಶ್ರೀ
ವತ್ಸಲ ಭಾವಜಾರಿಪ್ರಿಯ ಯಾದವಕುಲ ತಿಲಕ
ದೀನರೊರೆಯ ಲಾಲಿಸಿ ದಯೆಯಿಂ ಪರಿಪಾಹಿಮಾಂ ||ದೇ||

ಕ್ಷೀರವಾರಿಧಿ ಶಯನ ಸುರಾರ್ಜಿತ ಕಾಳಿಂಗ ಮರ್ದನ
ಲಕ್ಷ್ಮೀಪ್ರಿಯ ವೇದಪುರಾಣಗಳ ಮಹಾ ಪುರುಷ !
ಭವಧಿಯಲಿ ಮುಳುಗಿ ತಪಿಸುತಿಹೆ ಪರಿಪಾಹಿಮಾಂ ||ದೇ||

— ೦ —

# ಜನನ ಮರಣ....

ಜನನಮರಣಗಳ ದಂಥೆಯಲಿ ಲೇಸಿನಿತು ಕಾಣದೆ
ಘಾಸಿಪಟ್ಟೆನಯ್ಯ ನೊಂದೆದೆ ನೀರಾಗಿ ಹರಿವೊಲ್
ಭವಸಾಗರದಾಳದಲಿ ಮುಳುಗಿದೆ ವಿಾನಾಗಿ.

ಕರುಣೆದೋರ್ವರಿಲ್ಲ. ಪ್ರೀತಿಯ ಸವಿ ನೀಡಿದರಿಲ್ಲ.
ಅಯ್ಯೊ, ಎಂದು ಮರುಗಿದರಿಲ್ಲ. ಬಾಗಿದನಿತು ಹಿರಿ
ಗುದ್ದು ಬೆನ್ನ ಹುರಿ ಮುರಿದು ತುಂಡುಗಡಿಯುವಂತೆ. ||ಜ||

ಇಂತಿರುತಿರೆ ಎನ್ನಯ ಗತಿ ನೀನೇಂಗೈವೆಯೋ
ಪ್ರಾಣವಲ್ಲಭನೇ, ನೀನಿಲ್ಲದಾನೆಂತು ಬದುಕುವೆ ?
ಎನ್ನುಸಿರೆ ನೀನು ಎನ್ನಬಾಳಿಗೆ ನೀನೆ ಬೆಳಕು
ನೀನೇ ಪ್ರಾಣಾಧಾರ ಹರಿಯೇ ! ||ಜ||

— o —

## ಬಾಲಗೋಪಾಲ....

ಬಾಲಗೋಪಾಲ ಘನಮಹಿಮ ಶ್ರೀ
ಸಚ್ಚಿದಾನಂದ ಸ್ವರೂಪನೇ
ಮತಿಹೀನರಿಗಾರು ಗತಿ ನೀನಲ್ಲದೆ ?

ಹಲವು ಕರ್ಮಕಾಂಡಗಳಿಂದ ಹೊಲಬು
ತಪ್ಪಿದೆನ್ನ ಹೊಲಸು ಶರೀರದಲಿ
ನೀನಿರುತಿರೆ ಒಲವಿಂದ ಅರಿದೆನಿಲ್ಲ.
ನಿನ್ನ ಭಕ್ತಿಯಲಿ ಪೂಜಿಸಿದೆನಿಲ್ಲ ||ಬಾ||

ಬಾಲಗೋಪಾಲ ಶ್ರೀಕೃಷ್ಣನೇ
ಹನುಮನಂತೆ ಸೇವಿಸಲರಿಯೆ
ನಾರದನಂತೆ ಪೊಗಳಿಪಾಡಲರಿಯೆ
ಬಂಧಮುಕ್ತಿಗಾಗಿ ಬೇಡುತಿಹೆ ನಿನ್ನ
ಪರಿಪಾಲಿಸೈ ಬಾಲಗೋಪಾಲ ||ಬಾ||

— o —

# ಊರು ಕೇರಿ....

ಊರು ಕೇರಿಗಳಿಲ್ಲ ಎನ್ನವರೆನೆ
ಬಂಧುಮಿತ್ರರಿಲ್ಲ ಬಾ ಬಾರೆಂದು
ಕರೆದುಪಚರಿಸುವವರಿಲ್ಲವೆನಗೆ
ಪಾಹಿಮಾಂ ದೇವಾ ಪಾಹಿಮಾಂ.

ಬೀಜವೃಕ್ಷಗಳಿಂದಾಯ್ತು ಲೋಕದಿ
ಬೀಜವಾರಿಂದಾಯ್ತು ಬೀಜವೃಕ್ಷ
ನ್ಯಾಯ ನಿನ್ನನು ಬೇಧಿಸಲಾರದು
ಪಾಹಿಮಾಂ ದೇವಾ ಪಾಹಿಮಾಂ. ||ಊ||

ಲೋಕದೊಳ್ ನಿಂದೆಗೊಳಗಾಗಿ ಮನ
ಮತಿಗೆಟ್ಟು ಮುಂಗಾಣದಾಗಿಹೆನು
ಸುರರಾಜ ನಂದನನೆ ನೀನೆನ್ನ
ಪಾಹಿಮಾಂ ಪರಿ ಪಾಹಿಮಾಂ. ||ಊ||

ನೀನೆ ರಕ್ಷೆ. ನೀನೆ ಬಂಧುಬಳಗ
ನೀನೆ ಸರ್ವೋತ್ತಮ ಜಗದೋದ್ಧಾರ !
ನಿನ್ನನೆ ನಂಬಿಹೆನು ಪರಮಪುರುಷನೇ
ಪಾಹಿಮಾಂ ಪರಿ ಪಾಹಿಮಾಂ. ||ಊ||

— ೦ —

# ರಕುತ ಮಾಂಸದ....

ರಕುತ ಮಾಂಸದ ಬಿಗಿದ ರೋಮಕೂಪದ
ತೊಗಲಬೊಂಬೆಯು ನಂಬಿ ಜೀವನ ಬಂಧನ
ಕೈಕೊಂಡೊಡೆ ಗುರಿಮುಟ್ಟಲಹುದೆ ಪ್ರಭುವೇ !

ಅಕ್ಕರದ ಗಂಧವಿನಿತಿಲ್ಲದೆಯೆ ಬಾಳಿನ
ಚುಕ್ಕಾಣಿಯ ಪಿಡಿದೊಡೆ ದುಕ್ಕದಕ್ಕರೆಯು
ಸಕ್ಕರೆಯಲ್ಲದೆಯೆ ಬೇರೇನಿಹುದು ಪ್ರಭುವೇ ! ||ರ||

ತ್ರೈಗುಣಶೀಲ ನಿನ್ನನುಗ್ರಹವಿಲ್ಲದಿರೆ
ಕೀಲುಮುರಿದ ಕಾಲಗತಿ ತಪ್ಪದಿರ್ಪುದೆ
ಘೋರ ಕಂದಕದಲುರುಳಿ ಬಿದ್ದಿಹೆ ಪ್ರಭುವೇ ! ||ರ||

ಯೌವ್ವನ ಮದದಲಿ ಮರೆತೆ ನಾನಂದು ನಿಮ್ಮ
ಪದಾಂಬೋಜಗಳನು ಇಂದು ನೆನೆದು ನಿಮ್ಮ
ಮರುಗುತಿಹೆ ದುಃಖಸಂಕಟವೊತ್ತಿ ಪ್ರಭುವೇ ! ||ರ||

— ೦ —

# ಇಂದಿನೀ....

ಇಂದಿನೀ ಜನುಮದಲಿ ನೀನೆ ಬಂಧು
ಮುಂದಣ ಜನ್ಮ ಬಳಿಸಂದು ಕಾದಿಹುದು
ನಿನ್ನ ಕರುಣೆಯ ಪುರುಷೋತ್ತಮನೇ !

ಹಲವು ಕುಕರ್ಮ ಕಾಂಡಗಳಿಂದಾವ
ಲೇಸ ಬಿಂದುವ ಕಾಣೆ ನೀ ಜನುಮದಲಿ
ತುತ್ತು ಕೂಳಿಗಾಗಿ ತೊಳಲುತಿಹೆನು
ನಿನ್ನ ನಾಮಾವಳಿಯ ಸ್ಮರಿಸಲು
ಬಿಡುವಿರದೆ ಪರಮ ಪುರುಷೋತ್ತಮನೇ ! ||ಇಂ||

ಎತ್ತಿದೆನು ನಾನಾ ಜನುಮಂಗಳ
ನಲುಗಿದೆನು ನಿನ್ನ ಪಾದಂಗಳನು
ಕಾಂಬ ಲೇಸರಿಯದೆ, ಮತ್ತೆಮತ್ತೆ
ಜನನ ಮರಣಂಗಳ ತೊಡಕುಗಳನು
ತೊಡಿಸದಿರು ಪರಮ ಪುರುಷೋತ್ತಮನೇ ! ||ಇಂ||

ಜನುಮಜನುಮಕೂ ನೀನೆನ್ನ ಪ್ರಿಯ
ಬಂಧುವಾಗಿರೆ ಮತ್ತೇನ ಬೇಡುವೆ ?
ಕೈವಲ್ಯಪತಿ ನೀನೆನ್ನ ಕಾಯಬೇಕು
ಕರುಣೆಯಿಂದಲಿ ಕೈಬಿಟ್ಟಗಲದೆ
ಕಾಪಾಡು ಪರಮ ಪುರುಷೋತ್ತಮನೇ ! ||ಇಂ||

— o —

## ಗತಿವಿಹೀನ....

ಗತಿವಿಹೀನರಿಗಾರು ಪರಮಗತಿ
ನೀನಲ್ಲದೆ, ಕೊಡೆನಗೆ ದಿವ್ಯಗತಿ
ಕೈಮುಗಿದು ಬೇಡುವೆನು ಜಗತ್ಪತಿ !

ನಿನಗಪರಾಧವೆಸಗಿಹೆನು ಸಕಲ
ದುರಿತಗಳ ಬೆಂಬಿಡಿದು ಬಲುಮೆಯಲಿ
ಮೈಮರೆತು ಘಾಸಿವಟ್ಟೆ ಕೇಳಯ್ಯ
ಮನವಿಯ ಎನ್ನ ಜೀವನದೊಡೆಯ ! ||ಗ||

ಲೇಸಿನಿತು ಕಾಣೆನೀ ಭವಧಿಯಲಿ
ನಿನ್ನ ಧ್ಯಾನಿಸಲಿಲ್ಲ ತಂಪಿನಲಿ,
ಬಾಳು ಬದುಕಿನ ಜಂಜಡವೇ ಎಲ್ಲ.
ಕೇಳಯ್ಯ ಮನವಿಯ ಜೀವನದೊಡೆಯ ! ||ಗ||

ಎನ್ನೀ ಪಂಚಭೂತದ ಕಾಯದೊಳು
ವಂಚಸದೆ ನೀನಿರುತಿರಲು ಎನ್ನಯ
ಮರುಳು ತನದಿಂಗೈದಪರಾಧವ
ಮನ್ನಿಸಿ ಪರಿಪಾಲಿಸು ಜೀವನದೊಡೆಯ ! ||ಗ||

— ೦ —

# ತ್ರೀಲೋಕ....

ತ್ರಿಲೋಕ ಸಂಚಾಲನ ಕಾರ್ಯಭಾರದಲಿರೆ ನೀನು
ಎನ್ನ ಮೊರೆಯ ಕೇಳಲೆಲ್ಲಿ ಸಮಯವಿದೆ ನಿನಗೆ ?
ಭಂಗ ಬನ್ನಗಳಳಿಸಿ ಸಂತವಿಸೆ ಪರಮಾತ್ಮನೇ !

ಕಲಿಯುಗದೊಳ್ ನಿನ್ನ ಪರಿಪುಣ್ಯ ನಾಮವನು
ಸ್ಮರಿಸಿದರೆ ಕುಲಕೋಟಿಯುದ್ಧರಣವಾಗುವುದು
ಬಲು ಸುಲಭದ ಮುಕ್ತಿಗೆ ನಿನ್ನ ನೆನೆವುದೆ ಸಾಧನ. ||ತ್ರಿ||

ನೆನೆವೆ ನಿನ್ನ ಅನುದಿನ ಮನದಲಿ ಎಡೆವಿಡದೆಯೆ
ಹೇ ಕಮಲನಯನ ಅರವಿಂದನಾಭ ದಯೆಯಿಂದ
ತೋರೈ ನಿನ್ನ ವದನಾರವಿಂದವ ಶ್ರೀಹರಿಯೆ ! ||ತ್ರಿ||

ಲೋಕದೊಳ್ ಜಾನಹೀನನಾಗಿ ಮತಿಗತಿತಪ್ಪಿ
ಪರಿತಪಿಸುತಿರಲಾನು ಎಂತರಿದೆ ನಿನ್ನ ದೇವ
ನೀನೇ ಬಂದು ಮುನ್ನಡೆಸಯ್ಯ ಜೀವೇಶನೇ ||ತ್ರಿ||

— o —

# ಓ ನೀನಹುದು....

ಓ ನೀನಹುದು ಅಣೋರಣೀಯಾನ್
ಮಹತೋಮಹಿಯಾನ್ ಎನಲೊಪ್ಪದು
ಮನವೆನ್ನ. ಎಲ್ಲೆಲ್ಲಿ ಎನಿತೆನಿತು
ಹಣಿಕಿ ನೋಡಿದೊಡಲ್ಲಿ ನೀನಿಲ್ಲ.

ನಿನ್ನ ನೋಡದೆ ನಂಬುವೆನೆಂತಯ್ಯ
ಲೋಗರ ನುಡಿಯ ಕೇಳಿ ನಿನ್ನನರಸಿ
ಕಾಣದೆಯೆ ಸೋಲ್ದೆನಗೆ ದಯೆಗೈದು
ದರುಶನವ ನೀಡಿ ನಂಬಿಸೋ ಎನ್ನ. ||ಓ||

ನಿತ್ಯ ದುಃಖಸಂಕಟದಲಿ ಬೇವ
ಹೃದಯ ಸಾಂತ್ವನಗೊಳಿಸುತೆನ್ನ
ಕರುಣೆಯಿಂ ಕೈಹಿಡಿದು ಮುನ್ನಡೆಸಿ
ಕಡೆ ಹಾಯಿಸು ಹೇ ಮಮ ಸಿರಿದೊರೆಯೆ ! ||ಓ||

ನಿನ್ನಡಿಗಳ ಹಸುರಿನ ಹಂಬಲದ
ಹಸಿವು ತಳಮಳಿಸುತಿದೆ ಮುನ್ನುಗ್ಗಿ
ನಿನ್ನ ಪದಾಂಬೋಜಗಳ ಸನ್ನಿಧಿಗೆ
ನೀನೆ ಸರಿದಾರಿಯ ತೋರ್ಧೈ ಪ್ರಭುವೆ ! ||ಓ||

— o —

# ದೇವ ದಯಾಘನ....

ದೇವ ದಯಾಘನ, ನಿನ್ನ ಬೇಡುವೆನು
ಎನ್ನಯ್ಯ ಕರುಣಾಕರ ಶ್ರೀಹರಿಯೆ !

ಕತ್ತಲೆ ಸೆರೆಮನೆಯಲಿ ಸಂಜನಿಸಿದೆ
ನೀ ಜಗದೋದ್ಧಾರವ ಮನದೊಳಿಟ್ಟು
ತಾಯಿ ದೇವಕಿಯುದರವನು ತಣಿಸಿ. ||ದೇ||

ನಂದನಂದನ ದೇವಕೀ ಕಂದ
ಮುಕುಂದ ಪರಮಾನಂದ ಸುಂದರ
ಗೋವಿಂದ ಚೆಂದದಿಂದಲಿ ಬಾರೈ. ||ದೇ||

ಪುಟ್ಟಪುಟ್ಟ ಹೆಜ್ಜೆಗಳನ್ನಿಡುತೆ
ಗೆಜ್ಜೆಕಾಲಂದಿಗೆಗಳ ಧಿಮಿಧಿಮಿ
ಕುಣಿಸುತಲಿ ಬಾರಯ್ಯ ಮುಚುಕುಂದ ! ||ದೇ||

— o —

## ಹೇ ದೇವ....

ಹೇ ದೇವ ಪರಮ ಕರುಣಾ ಸಿಂಧು,
ಕರಮುಗಿವೆ ಪೊರೆಯೆನ್ನ ಮುಚುಕುಂದ !

ಅಲಕ್ಷಿಸದಿರು ದೀನಾತಿದೀನೆಯು
ನಿನ್ನ ದಯೆಯಿಲ್ಲದೆ ಬದುಕಲುಂಟೇ ?
ಮನಮರುಗಿ ದಿವ್ಯಕರುಣೆಯನು ತೋರು
ನಮಾಮಿ ತವ ಶ್ರೀ ಚರಣಗಳಿಗೆ. ||ಹೇ||

ಬಾ ಸರ್ವೇಶನೇ ಪರಮಾನಂದ
ಹರಿ ಗೋವಿಂದ ದಯೆಯಿಂದ ಬಂದು
ನೀನೆನ್ನ ಪೊರೆಯೊ ಶ್ರೀ ಪರಮಾತ್ಮ
ನಮಾಮಿ ತವ ಶ್ರೀಚರಣಗಳಿಗೆ. ||ಹೇ||

ಸಂಸಾರಾರ್ಣವದೊಳ್ ನಾಗೈದಿಹ
ಅನನ್ಯ ಸೇವೆಗಿನಿತು ಬೆಲೆಯಿಲ್ಲ
ನಿಂದೆಯಿಂದ ಬಲು ಬಳಲಿದೆನಯ್ಯ
ನಮಾಮಿ ತವ ಶ್ರೀ ಚರಣಗಳಿಗೆ ||ಹೇ||

— ೦ —

## ತರಳ ತನದ....

ತರಳತನದ ಮದದಲಿ ಮೈಮರೆತು
ನಿಮ್ಮ ನೆನೆಯದೆ ಗರುವದಲಿ ಮೆರೆದು
ಭವಸಾಗರದಲಿ ಮುಳುಗಿದೆನಯ್ಯ.
ಘೋರ ನರಕ ಭಾಜನನಾದೆ ಘನ
ಮಹಿಮ ನಿಮ್ಮನು ಮರೆತು ಪ್ರಭುವೇ !

ಜಗದ ಭಾರ ಕರ್ತನು ನೀನು ಬಹು
ಸಂಸಾರಿಯು ನೀನು ನಿಗಮತತಿ
ಕೈವಾರಿಸುತಿದೆ ನಿನ್ನಂತಾರು ಮನಮರುಗಿ
ನಿಜ ಮುಕ್ತಿಯನೀಯುವ ಸದ್ಗುರುವು
ಜಗಕೆ ನೀ ಪೇಳೆನ್ನ ಪ್ರಭುವೇ ! ||ತ||

ಮುಂಜಾನೆಯೊಳೆದ್ದು ಭಕುತಿಯಿಂದ
ನಿನ್ನ ಪರಮ ಧ್ಯಾನದೊಳ್ ನಾನಿಂದೆ
ನೀಕರುಣೆದೋರದಿರೆ ಗೋವಿಂದ
ಮತ್ತಾರು ಇಹರಯ್ಯ ಮತಿಹೀನ
ಜನರುದ್ಧರಣಕೆ ಹೇ ಪ್ರಭುವೇ ! ||ತ||

— o —

# ಕೃಷ್ಣಾ....

ಕೃಷ್ಣಾ ಬೇಗನೆ ಬಾರೋ ಸಿರಿವಿಠಲ !
ನಿನ್ನ ಪುಟ್ಟ ಪುಟ್ಟ ಹೆಜ್ಜೆಗಳಿಂದ
ಧಿಮಿ ಧಿಮಿ ಕುಣಿಯುತ ಬಾರಯ್ಯ.

ಏಸೇಸು ದಿನಗಳಿಂದ ಕಾದಿಹೆನು
ನಿನ್ನಯ ದರುಶನವ ಬಯಸಿ
ತವಿಸುತ ತವ ನಾಮಾವಳಿಯ. ॥ಕೃ॥

ನೀ ಬರುವ ಹಾದಿಯನು ಹಸನಿಸಲುರೆ
ಹಸುರು ಹಸೆಯ ಹಾಸಿಹೆನು ಹರಿಸರ್ವೇಶ
ತಪ್ಪದೆಯೆ ಬಾರಯ್ಯ ಮಮಬಂಧು ! ॥ಕೃ॥

ಸ್ವಾಮಿಾ ಮತ್ತೆ ಮರುಹುಟ್ಟು ಪಡೆಯಲು
ತಳ್ಳದಿರೆನ್ನ ಜನುಮಜನುಮಗಳಿಗೆ
ಈ ಜನ್ಮವೇ ಸಾಕೆನಗೆ ನಿನ್ನ ಸೇವಿಸೆ. ॥ಕೃ॥

— ೦ —

## ಶ್ರೀ ಕೃಷ್ಣ....

ಶ್ರೀ ಕೃಷ್ಣ ಪರಮಾತ್ಮಾ ನೀನೆಲ್ಲಿರುವೆ ?
ಬಾರಯ್ಯಬಳಿಗೆ ನಿನ್ನ ಮುದ್ದುಮೊಗವ ತೋರೆ.
ಬಾರಾ ಓಡಿ ಬಾರಾ ಶ್ರೀ ಜನಾರ್ದನ !

ಮುಕುಂದ ಮುರಮರ್ದನ ಮುರಾರಿ
ಬಾರಯ್ಯ ದೀನದರಿದ್ರರ ಬೀಡಿಗೆ
ನಂದನಂದನ ಮುದ್ದು ಕಂದ ಬಾರಯ್ಯ. ||ಶ್ರೀ||

ನಿನ್ನ ಅರಸುತನದ ಹಿರಿಮೆಯ ಬಿಟ್ಟು
ಬಾರ ಸುಕೋಮಲ ಸುಂದರಾಂಗನೇ
ಬಾ ಬಾರೆನ್ನ ಮನವಿಯನು ಮಾನಿಸಿ. ||ಶ್ರೀ||

ಎನ್ನಯ್ಯ ಮುದ್ದು ಮೂಜಗದೊಡೆಯ
ಬಾರಯ್ಯ ಚಂದ್ರ ಚಕೋರ ಶ್ರೀಶನೇ
ಭಕ್ತಿಯಿಂದ ಕೈಮುಗಿದು ಬೇಡುವೆನು ||ಶ್ರೀ||

— o —

## ಕಾಳಿಂದಿ....

ಕಾಳಿಂದಿಯಲಿ ಧುಮುಕಿ ಕಾಳಿಂಗನ
ಮಸ್ತಕದ ಮೇಲೆ ನರ್ತಿಸಿ ದುರುಳ
ಗರಳವನು ಜಡಿಕುಟ್ಟಿ ಕಕ್ಕಿಸಿದ
ಪರಮಾತ್ಮನೇ ಶಿರಸಾ ನಮಾಮಿ.

ಗೋವಳರ ಸಂರಕ್ಷಿಸೆ ಬೃಹದ್
ಗೋವರ್ಧನಗಿರಿಯನೆತ್ತಿ ಹಿಡಿದ
ಗೋಪಾಲಗೋವಿಂದ ಬಂದು ಕಾಯೆನ್ನ
ಪರಮಾತ್ಮನೇ ಶಿರಸಾ ನಮಾಮಿ. ||ಕಾ||

ಘೋರ ಬಕಾಸುರನ ಬಾಯನು ಶೀಳಿ
ಧೂರ್ತಕಂಸನ ಯುದ್ಧದಲಿ ಕೊಂದು
ಮಾತಾ ಪಿತೃಗಳ ಬಂಧನ ಬಿಡಿಸಿದ
ಪರಮಾತ್ಮನೇ ಶಿರಸಾ ನಮಾಮಿ. ||ಕಾ||

ಗಂಧಪನ್ನೀರಿನ ತಳಿರ ಕಟ್ಟಿ
ಮಾವಿನ ತೋರಣವನು ಸಾಲ್ಯೆಸಿ
ಚಂದ್ರಸಾಲೆಯ ಶೃಂಗರಿಸಿ ಕಾದಿಹೆ
ಪರಮಾತ್ಮನೇ ಶಿರಸಾ ನಮಾಮಿ. ||ಕಾ||

— o —

# ನಿನ್ನ ಗೆಣೆಯರ....

ನಿನ್ನ ಗೆಣೆಯರ ವೃಂದ ಕಾದಿಹುದು
ಯಮುನೆಯ ತಟನಿಯಲಿ ನಿನಗೆಂದು
ಮಘಮಘಿಪ ಮಲ್ಲಿಗೆಯ ಹಾರವನು
ಕೈಕೊಳ್ಳೈ ನೀ ಬಾರಯ್ಯ ಶ್ರೀವರನೆ
ಓಡೋಡಿ ಬಾರಯ್ಯ ಪ್ರಭುವೇ !

ದಧಿಕ್ಷೀರದ ಕುಡಿಕೆಗಳನು ಸೇರಿಸಿ
ನವನೀತದ ಮಡಿಕೆಯ ನಡುವೆಯಿಟ್ಟು
ಪೂರ್ಣೇಂದು ವದನೆಯರು ಕಾದಿಹರು
ನಿನ್ನ ಸುಖಾಗಮನವನು ಬಯಸುತ್ತ
ಓಡೋಡಿ ಬಾರಯ್ಯ ಪ್ರಭುವೇ ! ||೨||

ನಂದನಂದನ ಗೋಪೀಕಂದ ಸಿರಿ
ಮುಕುಂದ ಶ್ರೀಗೋವರ್ಧನ ಧಾರಿ
ನಿನ್ನ ಪೊಗಳಲಳವೇ ಕಿರು ಜಿಹ್ವೆಗೆ
ನೀನಹುದು ದೇವರದೇವ ಎಂಬೆನು
ಓಡೋಡಿ ಬಾರಯ್ಯ ಪ್ರಭುವೇ. ||೨||

— o —

## ಲಾಲಿಸಿದಳು....

ಲಾಲಿಸಿದಳು ದೇವಕಿ ಮುದ್ದು ಕಂದ
ಮುಕುಂದ ಮಾಧವನ ತೊಟ್ಟಿಲತೂಗಿ.
ಪರಮಾನಂದದಿಂದ ಲಾಲಿ ಪರಮ ಲಾಲಿ
ಗೀತವ ಹಾಡಿದಳು ಜಗದೋದ್ಧರಣಕೆಂದು.

ಭಾರತಧಾತ್ರಿಯ ಪುನೀತಗೈದಾ
ಗೋಪಾಲಕೃಷ್ಣ ಕಾಮನ ಜನಕ
ಅರವಿಂದ ನಾಭನ ಆನಂದದಿಂದ
ಲಾಲಿಸಿದಳು ಜಗದೋದ್ಧರಣಕೆಂದು. ||ಲಾ||

ವೇದಗೋಚರ ನಿತ್ಯಾನಂದನನ್ನು
ತನ್ನ ಕಂದನೆಂದು ಪರಿಭಾವಿಸುತ
ಲಾಲಿಸಿದಳು ಪುಣ್ಯವತಿ ದೇವಕಿ
ತೊಟ್ಟಿಲನು ತೂಗಿ ಜಗದೋದ್ಧರಣಕೆಂದು. ||ಲಾ||

— ೦ —

# ಕ್ಷೀರಾಬ್ಧಿ ....

ಕ್ಷೀರಾಬ್ಧಿಶಯನ ಶ್ರೀಗೋಪಾಲ
ಕೈಮುಗಿದು ಬೇಡುವೆ ಕರುಣೆಯಿಟ್ಟು
ನಲವಿಂದ ಬಾರಯ್ಯ ಎದೆಗುಡಿಗೆ.

ಲೋಕದಲಿ ನಿತ್ಯ ಸೃಷ್ಟಿಕರ್ತನು ನೀನು
ದೀನಾತಿ ದೀನೆಯು ನಾನು ಎನಗೆ
ನೀನಲ್ಲದಾರು ಗತಿ ಪೇಳ್ ಪ್ರಭುವೇ ||ಕ್ಷೀ||

ವಿಶ್ವಸಂಸಾರಿಯು ನೀನಾಗಿರುತಿರೆ
ಎನ್ನೆಂತು ಗಮನಿಸುವೆಯೊ ಆನರಿಯೆ
ದೇವಾಧಿದೇವ ರಕ್ಷಿಸೆನ್ನ ಅನವರತ ||ಕ್ಷೀ||

ಲೋಕದೊಳ್ ಚೆನ್ನಿಗನಾಗಿ ಚಂದದಿ
ಹಾಡಿಪಾಡಿ ನಲಿದಾಡಿ ಕುಣಿಯುತ
ಬಾರಯ್ಯ ಎನ್ನಯ ಪರ್ಣಕುಟಿಗೆ ||ಕ್ಷೀ||

— • —

# ಯಮುನಾ....

ಯಮುನಾ ತೀರದ ಬೃಂದಾವನಕೆ
ಹೋಗುವ ಬಾ ಬಾರೆ ಪೂರ್ಣೇಂದು ಮುಖಿ !

ಗೋವಳರೊಡಗೂಡಿ ಗೋಕರುಗಳ
ಒಡನಾಡಿ ನಲಿಯುತಿಹ ನೋಡೆ ಸಖಿ ! ||ಯ||

ದಧಿ ಕ್ಷೀರವ ಕೊಂಡೊಯ್ದು ಹರಿಯನು
ಕಂಡು ಒಡಲನು ತಣಿಸುವ ಬಾರೆ ಸಖಿ ! ||ಯ||

ದೇವಕೀನಂದನನ ಚಂದದಿಂದ ನಾವು
ಕುಂಡು ಬರುವಾ ಬಾಬಾರೆ ಪ್ರಿಯಸಖಿ ! ||ಯ||

ನವನೀತವ ಕುಡಿಕೆಯಲಿ ತುಂಬಿ
ಕೊಂಡೊಯ್ಯುವ ಬಾರೆ ಚಂದ್ರಮುಖಿ ! ||ಯ||

ಕೊಳಲನೂದುತ ಗೆಳೆಯರ ಬಳಗವ
ರಮಿಸುವ ಮನಮೋಹನನ ಕಾಣ್ಬದೆ
ಸ್ವರ್ಗಸುಖ ಕೇಳೆ ಸಖಿ ! ||ಯ||

— ೦ —

# ಪಂಚ ಭೂತದ....

ಪಂಚಭೂತದ ಕಾಯದೊಳು ನೀನೆ ಇರುತಿರೆ
ಎಲ್ಲಿಯ ವಂಚನೆಯೆನಗೆ ದೇವ ? ಮತಿಗೆಟ್ಟು ನಿನ್ನ
ಮರೆತುದೆನ್ನ ಕುಕರ್ಮವಲ್ಲದೆ ಬೇರೇನಲ್ಲ.

ಬುದ್ಧಿಯ ಬಲವಿಲ್ಲ. ಜ್ಞಾನದ ಬಲವಿಲ್ಲ.
ಗುರುವಿಲ್ಲ ಮುಂದೆ. ಹಿರಿಯರಿಲ್ಲ ಹಿಂದೆ.
ನಿನ್ನರಿವು ಮೊದಲೇ ಇಲ್ಲ. ನೀನೇ ಸಂರಕ್ಷಿಸು.

ಈಗಲೋ ಇನ್ನಾವಾಗಲೋ ಬಿದ್ದು ಹೋಗುವ
ಈ ಜಡದೇಹ ಸಂಪುಟವ ನೆಚ್ಚಿ ಮರೆತೆ ದೇವ,
ಇನ್ನೆಂದಿಗೂ ನಿನ್ನ ಸಮಾಗಮವ ಬಯಸುವೆ. ||ಪಂ||

ಮೈಮರೆತು ಮರುಳಾಗಿ ಗತಿ ತಪ್ಪಿದೆನೆಂದೆಂದು
ನಿರ್ಲಕ್ಷಿಸಿ ದೂರೀಕರಿಸದಿರೆನ್ನನು ಸ್ವಾಮಿ !
ಅರಿಯದೆ ನಾಗೈದಪರಾಧವನು ನೀಲಕ್ಷಿಸದೆ
ಪೊರೆಯೆನ್ನ ಪರಮಾತ್ಮನೇ ! ||ಪಂ||

— o —

## ಒಡೆಯ....

ಒಡೆಯ ನಿಮ್ಮಡಿಯನು ಮರೆತು ವಿಷಯ
ವಾಸನೆಗಳಲಿ ಮುಳುಗಿ ತೊಳಲುತಿಹೆ
ತಾಳಲಾರೆ ಬಾಳಲಾರೆ ಪ್ರಭುವೇ !

ಕಟ್ಟುರಿಯಲಿ ಬೇಯುತಿದೆ ಉರಿಬಾಳು
ತಣ್ಣನೆಯ ತಣ್ಪಿನಾಶ್ರಯವಿಲ್ಲದೆ
ಶಾಂತಿ ಸುಖದ ಸುಜೀವನವದಿಲ್ಲದೆ
ಬೆಂದು ಬೇಯುತಿಹೆ ಪೊರೆಯೊ ಪ್ರಭುವೇ ! ||ಒ||

ಸಂಸಾರ ಮಹಾರ್ಣವದೊಳ್ ಘೋರ
ಪನ್ನಗದ ಕ್ರೂರ ದಂಷ್ಟ್ರನದಿಂದಲಿ
ಜಡವೆತ್ತು ನಿನ್ನನೆ ಮರೆತು ನರಳುತಿಹೆ
ರಣಗೋಳಿನಲಿ ಮುಳುಗಿ ಪ್ರಭುವೇ ! ||ಒ||

ನಿನ್ನ ಕಾಂಬೊಂದು ಹೇರಾಸೆಯು ಕಲ್ಪ
ಕುದಿಕುದಿದು ಮೈ ನೆತ್ತರನು ಹೆಪ್ಪುಗಟ್ಟಿಸುತಿದೆ,
ನೀನೆ ವರದಾತ. ನೀನೇ ಮುಕ್ತಿದಾತ,
ನೀನೆ ಪೊರೆಯೆನ್ನ ಪರಮಾತ್ಮ ಪ್ರಭುವೇ !

— ೦ —

ಕಲಿತವರು ಜ್ಞಾನಿಗಳೆನಿಸಿ ಜಾನಿಪರು ನಿನ್ನ
ಧರ್ಮ ಧುರಂಧರರುಧರ್ಮಜ್ಞರೆನಿಸಿ ಗೆಲ್ವರು ನಿನ್ನ
ಆನೇಗೈಯಲು ಬಲ್ಲೆ ಪೇಳ್ ಪರಮಾತ್ಮನೇ !

ನಿನ್ನರಿವ ಹಂಬಲದಿಂದೆ ನಿನ್ನ ಸಂಸೇವಿಪ
ಆಕರದಿಂದೆ ನಿನ್ನನೆ ಸಂಪೂರ್ಣನಂಬಿಹೆ
ಎನ್ನ ಭಂಗವ ಪೋಗಲಾಡಿಸು ಪರಮಾತ್ಮನೆ ! ||ಕ||

ನಿನ್ನ ಧ್ಯಾನಿಸಿ ಭಕ್ತ ಭಾವದಿಂ ಮನತುಂಬಿ
ಎದೆತುಂಬಿ ಕಾಲ್ವಿಡಿದು ವಂದಿಸುವೆನು
ದುರಿತಗಳ ಕಳೆದು ಉದ್ಧರಿಸು ಪರಮಾತ್ಮನೇ ! ||ಕ||

ದೀನಾತಿದೀನೆ ನಾನು. ಸರಿದಾರಿಯಂ
ತೋರ್ಪರಿಲ್ಲ. ಕರುಣೆದಯೆಗಳಿಂದ
ಆದರಿಪರಿಲ್ಲ. ನಿನ್ನನುಳಿದೆಲ್ಲಿಯ
ಗೆಲವು ಪ್ರಭುವೇ ! ||ಕ||

— o —

## ನಿತ್ಯ ಕಾಪುರುಷ....

ನಿತ್ಯ ಕಾಪುರುಷನೆನ್ನ ಕಾಡುವನು ಕಾಮನೆಗೆ
ಶರಣಾಗಿ ದುಃಖ ದುಗುಡಗಳ ಕೋಟೆಯಲಿ
ನರಳುತಿಹೆ ಸುಖಶಾಂತಿಗಳಿಂದಲಿ ದೂರಾಗಿ.

ಧರ್ಮಶ್ರವಣಗೈಯ್ಯದ ಮಂದ ಬುದ್ಧಿಯನು
ಏಂಗೈಯಲಿ ದೊರೆಯೆ ? ಎಂತು ಪೊರೆವೆ ನಾನಿರಲಿಂತು
ದೇವಾಧಿದೇವನೇ ! ನೀನೇ ಪರಾಂಬರಿಸು. ||ನಿ||

ಹೆಣ್ಣಾಗಿ ಪುಟ್ಟಿ ವಿದ್ಯೆಬುದ್ಧಿಗಳಿಂದ ದೂರಾದೆ
ಧರ್ಮಾನುಷ್ಠಾನವರಿಯುದ ಬಾಳು ನರಕವಾಯ್ತು.
ನರಳುತಿಹೆ ಕೂಪಕೂರ್ಮಗಳಿಗಿಂತ ಕಡೆಯಾಗಿ. ||ನಿ||

ನೀನೆಂತು ಪರಿಭಾವಿಸುವೆಯೊ, ಅಲ್ಲದಸಲ್ಲದ
ಭವ ಭಂಗದಲಿ ತೊಳಲಿ ಬಳಲಿ ಬೆಂಡಾಗಿರಲಾನು
ಕರುಣದಿಂ ಸಡ್ಡೆಯಿಂ ಬಂದೆನ್ನ ಪೊರೆಯೋ ದೇವ ! ||ನಿ||

— ೦ —

# ನಿನ್ನನೇ ನಂಬಿ....

ನಿನ್ನನೇ ನಂಬಿ ನಿನ್ನನೇ ಭಜಿಸಿ
ನಿನ್ನನೇ ಧ್ಯಾನಿಸಿ ನಿನ್ನ ಪಾದಗಳ
ಹುಡಿಯೊಳ್ ಬೆರೆತು ಹುಡಿಗೊಳ್ವ ಬಯಕೆ.

ಆದರದು ತೀರದ ಬಯಕೆ ತೀರದ ದಾಹ
ನೀನೇ ಎನ್ನ ಮನದಾಸೆಗೆ ಮಾರೊಡ್ಡು
ನಿನ್ನ ನಾ ಬಯಸಿದೊಡೆ ನೀನ್ನೊಂದೆಡೆಗೆ ತಳ್ಳುವೆ. ||ನಿ||

ನೂರಾರು ಹೀನದ ಹೇರಾಸೆಯಲಿ
ತಳ್ಳಿ ಮುಳುಗಿಸಿ ಆಳವ ನೋಡುತ
ದುರಿತ ರಾಶಿಯಲಿ ನರಳಿಸುವೆ ದೇವ ! ||ನಿ||

ನೀನೆ ವಿರುದ್ಧವಾದೊಡೆಂತು ನಿನ್ನ
ನೀಡದ ಪಥವನು ಕಾಂಬೆನ್ನೈದೊರೆಯೆ
ನಿನ್ನ ಕಾಣಲಾಗದೆ ತೊಳಲುತಿಹೆ ನಿನ್ನ ಕಣ್ಣೆದುರೆ ||ನಿ||

ಆದೊಡಂ ಗುರಿಯ ಮುಟ್ಟಲಾರೆ
ಒಳಗೆ ಬಾಳಲಾರೆ ಬದುಕಲಾರೆ
ನೀನೇ ಕೈಹಿಡಿದು ನಡೆಸೆನ್ನ ಪ್ರಭುವೇ ||ನಿ||

— o —

# ಒಡಲ ದಾಹದ....

ಒಡಲ ದಾಹದ ಕಾಮಕಾಮನೆಗಳನಾ ನೆಚ್ಚಿ
ನಂಬಿ ನಿನ್ನನೆ ಮರೆತು ಹೇಸು ಬಾಳಿನ ರಂಗದಿ
ಅಂಡಲೆಯುತಿಹೆ ಕಾಣದೆ ನಿನ್ನರಮನೆ ಪಥವ.

ಊರು ಎನಗೊಂದಿಲ್ಲ, ಎನ್ನವರೆಂಬುವರಿಲ್ಲ.
ಒಳಹೊರಗೆ ನೆರವು ನೀಡುವರಿಲ್ಲ, ಮನಮರುಗಿ
ಮೈದಡವುವವರಿಲ್ಲ, ಲೋಕದೊಳೆಲ್ಲ ನೀನೆ ಅಯ್ಯ. ||೧||

ನೀನಹುದು ಜಗನ್ಮಿತ್ರ ನೀನಹುದು ಎನ್ನಯ
ಹೃದಯನಾಥ ನಿನ್ನಯ ನೆರವಿಲ್ಲದೆ ಆನೇನು
ಗೈಯಲಾರೆ ತಿಪ್ಪ ತಿಪ್ಪ ಹೆಜ್ಜೆ ಇಡುವೆ ನಿನ್ನ ನೀಡಕೆ. ||೧||

— o —

# ಪುಷ್ಪಾರ್ಚನೆ....

ಪುಷ್ಪಾರ್ಚನೆಗೈದನೆನೆಹಸುರಿಲ್ಲದ ಬದುಕಿನಲಿ
ಜೀವ ಕುಸುಮವೆ ತವ ಪಾದ ಪೂಜೆಗೆ ಮೀಸಲು
ಹೇ ಎನ್ನ ಜೀವದೊಡೆಯ ಶ್ರೀ ಪರಮಾತ್ಮನೇ !

ನಿನ್ನ ಪೂಜಿಸುವಾಸೆ ಮತ್ತೆ ಧ್ಯಾನಿಸುವಾಸೆ
ತುಂಬಿ ಒಡಲಿನ ಒಡ್ಡು ಬಿರಿಯುವಂತೆ ಹರಿಯುತಿದೆ
ನಿನ್ನ ಭಾವಿಸಲರಿಯದೇಂಗೈಯಲಿ ಪರಮಾತ್ಮನೇ ! ||ಪು||

ನಿನ್ನಯ ವಿರಾಟ್ ಸ್ವರೂಪವನೆಂತು ಅರ್ಥೈಸಿ
ಪರಿಭಾವಿಸುವೆ ಅಲ್ಪಮತಿಯಿರುತಿರಲಾನು
ನೀನೈದು ಈ ಜಡಮತಿಯನುದ್ಧರಿಸು ಪರಮಾತ್ಮನೇ ! ||ಪು||

— ० —

# ಜಾತಿಕುಲ....

ಜಾತಿಕುಲ ಎಂದೆನುತ ಸಂಕುಚಿತ ಭಾವನೆಯು
ಹುಚ್ಚು ಹೊಳೆಯುಲಿ ಕೊಚ್ಚಿ ಹೋಹರೆ ಇಂದಿನೀ
ವಿಶಾಲ ಜಗತ್ತಿನಲಿ ?

ಮನಃಚಿತ್ತಗಳ ಶುದ್ಧಿಯಿಂದೆ ಗುಣವಿಶೇಷವ
ಗಮನಿಸಿ ಕುಲಶುದ್ಧಿಗೈವುದಲ್ಲದೆಯೆ ಈ
ಕುಲಕಾಗಿ ಬಡಿದಾಡದಿರಿ. ||ಜಾ||

ಮೇಲುಕೀಳುಗಳೆಲ್ಲ ಕಿರುಮನದ ಕಜ್ಜಾಯ
ಜ್ಞಾನ ವಿಜ್ಞಾನದ ನಿಧಿಗಾಗಿ ನೆರೆ ಜಾನಿಸಿರೊ
ಕೀಳುಮನದ ಆಳಾಗದೆ. ||ಜಾ||

ಎದೆಗಡಲಲಿ ಪ್ರೇಮದ ಊಟೆ ಪಸರಿರೆ ಕೇಳ್ಳೆ
ರಾಗಯೋಗಿ ಕೋಗಿಲೆಯ ಸ್ವರ. ಕೋಗಿಲೆಗಾವಕುಲ
ಪರಿಭಾವಿಸಿ ನೋಡಿರೋ. ||ಜಾ||

— o —

# ಈ ಜಗತ್ ಸೃಷ್ಟಿಗೆ....

ಈ ಜಗತ್ ಸೃಷ್ಟಿಗೆ ಆವಾವ ವಸ್ತು ಸಮುಚ್ಚಯಮೋ
ಪರಮಾತ್ಮನೇ ! ಎಂತು ನಿರ್ಮಿಸಿದೆ ? ಮತ್ತೆಂತು ನಿರ್ವಹಣೆ?
ತ್ರಿಲೋಕ ಯಂತ್ರ ಸಾಮಾನ್ಯವೇ ಹೇ ನಿಗಮಗೋಚರನೆ !

ಕಿಂಚಿತ್ ಸಡಿಲ್ಕದೊಲ್ ಲೋಕಯಂತ್ರ ನಡೆದಿದೆ
ನಿನ್ನಯ ಸಂಚಾಲನೆಯಲಿ. ನೀನಿಲ್ಲವಾದೊಡೆ
ಎಲ್ಲಿರುತಿತ್ತು ಈ ಜಗತ್ ಚಕ್ರದ ಮಹಾ ಉರುಟಣೆ ? ||ಈ||

ನಿರೀಶ್ವರ ವಾದಿಗಳ ಗಂಡೆದೆಗಳಿಗೇನೆಂಬೆ
ಹೇ ತ್ರಿಲೋಕೇಶ್ವರ, ಜಗದಾನಂದ ಕಾರಕ.
ನೀನು ಸೃಷ್ಟಿ ಸ್ಥಿತಿ ಲಯ ಕರ್ತನಲ್ಲದಿನ್ನುಂಟೆ ?
ನಮೋನಮೋ ಪರಮಾತ್ಮನೇ ! ||ಈ||

— o —

# ನಾನಾಗಿ ಬರಲಿಲ್ಲವೀ....

ನಾನಾಗಿ ಬರಲಿಲ್ಲವೀ ಧಾರಿಣಿಗೆ ಪ್ರಭುವೇ !
ನಿನ್ನ ಕೃಪೆಯಿಂದಲ್ಲದೆ ಬರುವೆನೆಂತಿಲ್ಲಿಗೆ ?
ನೀನೇ ಕರುಣೆದೋರಿ ಸಲಹಬೇಕೋ ಶ್ರೀರಮಣನೆ !

ಲೋಕದೊಳ್ ಲಜ್ಜೆಗೇಡಿಯಾಗಿ ನಿನ್ನಯ
ಪಾದ ಸೇವೆಯಿಂದ ವಂಚಿತಳಾದೆನಯ್ಯ
ನಿತ್ಯಧ್ಯಾನಿಸಿಯೂ ಸತ್ಫಲವಿಲ್ಲ ಪ್ರಭುವೇ ! ||ನಾ||

ಇಲ್ಲಿಹನು ಅಲ್ಲಿಲ್ಲವೆಂಬ ಸೊಲ್ಲು ಸಲ್ಲುವುದೇ
ನಿನಗೆ ? ನೀನಿಲ್ಲದನ್ಯಕ್ಷೇತ್ರವದೆಲ್ಲುಂಟು
ಹೇಳೈ, ಪ್ರಿಯ ಪ್ರಾಣವಲ್ಲಭ ಪರಮಪುರುಷನೇ ! ||ನಾ||

ನಿನ್ನ ದಯೆಯಿಂದ ಮನುಕುಲದಲಿ ಸಂಜನಿಸಿ
ಅರಿಯದಾದೆನಿನಿತು ತವ ರೂಪುರೇಷೆಯ ಹುರುಳ್.
ನೀನೆನ್ನ ಸರಿಪಥದೊಳ್ ಕಡೆ ಹಾಯಿಸು ಶ್ರೀರಮಣನೆ ! ||ನಾ||

— ೦ —

# ನದಿಹೊಳೆ....

ನದಿಹೊಳೆ ತೊರೆ ಜಲಧಿಗಳ್ ಬೇರೆಬೇರೆಯೆನೆ
ನೀರು ಎಂದೆಂದೂ ಒಂದೇಯಲ್ಲದೆ ಬೇರಲ್ಲ ತಿಳಿಮನವೆ.

ಆಭರಣಗಳು ವಿಧವಿಧವಾಗಿರುತಿರ್ದೊಡೇನು
ಶುದ್ಧ ಬಂಗಾರ ಒಂದೇಯಲ್ಲದೆ ಬೇರಲ್ಲ ತಿಳಿಮನವೆ. ||ನ||

ಅಲ್ಲಾ ವಿಷ್ಣು ಏಸು ಎಂಬ ಪುಣ್ಯಪುರುಷರು ಬೇರೆ ಬೇರೆ
ಇರುತಿರೆ ದೇವರೊಂದೆಯಲ್ಲದೆ ಬೇರಲ್ಲ ತಿಳಿಮನವೆ. ||ನ||

ವಿಧವಿಧ ಧರ್ಮ ನೀತಿಗಳು ಬೇರೆಯೇ ಇರುತಿರಲ್
ಕೊನೆಗೆಲ್ಲರ ಗುರಿಯೊಂದೆಯಲ್ಲದೆ ಬೇರಲ್ಲ ತಿಳಿಮನವೇ. ||ನ||

ಎಲ್ಲದರ ಹಿನ್ನೆಲೆಯಲಿ ನೀನಿರ್ಪುದಲ್ಲದೆ ಬೇರೆ
ಏನಿಲ್ಲವು ಹೇ ವರ ಚೆನ್ನಿಗ ಪುರುಷೋತ್ತಮನೇ. ||ನ||



# ನಿನ್ನಡಿದಾವರೆ....

ನಿನ್ನಡಿದಾವರೆಗಳ ಧೂಳಿಯಲಿ
ಹೊರಳಿ ಭಕ್ತಿ ಪುಲಕ ಮನದಲಿ
ನಮಿಸುವೆನು ಪ್ರಭುವೇ.

ಪ್ರಾತಃಕಾಲದೇಕಾಂತದೊಳಾನು
ಹುರುಪುಗೊಂಡ ಹೃದಯ ಸ್ಪಂದೆಯಲಿ
ಕಾಲ್ವಿಡಿದು ಬೇಡುವೆ ನಿನ್ನ ಲಾಲಿಸೈ. ||ನಿ||

ಭಕ್ತಿಭಾವದುಜ್ವಲ ಕಿರಣಗಳ
ಜಾಲದಲಿ ಮಿಂದೆನ್ನ ಮನಮತಿಗಳ
ಮೊರೆಯುನು ಲಾಲಿಸಿ ಪರಿಪಾಲಿಸೈ. ||ನಿ||

ದೇವಾ, ದಯಾನಿಧಿಯೆ ಕಿವಿಗೊಟ್ಟು
ಕೇಳೆನ್ನ ದೀನ ಮೊರೆಯ ಮನಗೊಳಿಸಿ
ಎನ್ನ ಪರಿಪಾಲಿಸೈ ಪ್ರಭುವೆ ! ||ನಿ||

— ೦ —

# ನೀಂ ನಿರಾಕಾರನೋ....

ನೀಂ ನಿರಾಕಾರನೋ ಸಾಕಾರ
ತೇಜಸ್ವಿಯೊ ಅರಿಯೆನಾ ಪ್ರಭುವೇ !
ನಿನ್ನ ಪರಿಪೂಜಿಸಲಾಸೆ ಮನದಿ.
ಪೇಳ್, ಆವರೂಪದಿ ಪೂಜಿಸಲಿ ?

ಆವ ಪರಿಯಲಿ ಧ್ಯಾನಿಸಲಿ ದೊರೆಯೆ,
ಯೋಚಿಸಿಯು ಅರ್ಥೈಸಲಾರನೆನೆ
ನಿನ್ನನು ಅರಿಯದೆಂತು ಧ್ಯಾನಿಸಲಿ
ಎಂತು ಕತ್ತಲೆ ಜಾಡಿನಲಿ ನಡೆಯಲಿ ? ||ನೀಂ||

ನೀನೆಲ್ಲಿರುವೆ ಎಂತಿರುವೆ ಪ್ರಭುವೇ
ಅರಿಯದೆನೆಗೆ ನೀನೆ ಗತಿತೋರ್ರೈ
ನೊಂದೆದೆಯ ಹೆಬ್ಬಯಕೆಯನು ತಣಿಸು
ಹೇ ಎನ್ನಯ ಜೀವನದೊಡೆಯನೇ ! ||ನೀಂ||

— ೦ —

# ಪಾಪಗಳ ಕೂಪವೀ....

ಪಾಪಗಳ ಕೂಪವೀ ಸಂಸಾರಯೋಗ ತವ
ಪಾದ ಪದುಮಗಳಿಗರ್ಪಿಸೆ. ದುಃಖದ
ಬೀಡಿನಲಿ ಹುಟ್ಟಿ ಮುಂಬೆಳೆದಹಿತ
ಪ್ರಕಾರವಿದು ಹೇ ಜೀವೇಶ ಪ್ರಭುವೇ !

ಎನಿತೆನಿತು ಪ್ರಯತ್ನಿಸಿದೊಡೆನ್ನ
ದೇಹ ಕಣಜವ ತೊಳಗಿ ಬೆಳಗಿಸಲಾರೆ.
ನಿನ್ನ ಪಾದ ಪದುಮಗಳಿಗೊಪ್ಪಿಸೆ
ಯೋಗ್ಯವೆಲನುಂಟೇ ಪರಮಾತ್ಮ ? ||ಪಾ||

ಹೇ, ಸಿರಿದೊರೆಯೆ ನೀನೆಲ್ಲಿರುವೆ ?
ಎಂತಿರುವೆ ? ಯೋಚಿಸಿ ತಿಳಿಯೆನೆಂದೂ
ಅರಿತು ಪರಿಭಾವಿಸೆನೆಂದೂ ನಿನ್ನಯ
ನಿಜ ಸ್ವರೂಪವಮಂ ಹೇ ಎನ್ನ ಪ್ರಭುವೇ ! ||ಪಾ||

— ೦ —

# ಮನುಕುಲದಲಿ....

ಮನುಕುಲದಲಿ ಸಂಜನಿಸಿಯು ಮಾನವೀಯತೆಯ
ಮನಗಾಣದೆ ಜೀವನ ವ್ಯರ್ಥವಾಯಿತಯ್ಯಾ
ವಿದ್ಯೆ ಬುದ್ಧಿಗಳನರಿಯದ ನಿನ್ನ ಭಕ್ತಿಯನು
ಮರೆತು ಜಡವಾದೆ ಜಗದ ಚೆಂಬೆಳಕಿನ ಮುಂದೆ.

ಮಂದಮತಿಯಾಗಿ ಪರನಿಂದೆಯಲಿ ನೆರೆ ಮುಳುಗಿ
ಸಂದು ಹೋದುದು ದಿವ್ಯ ಕಾಲಮಾನವೆನ್ನ
ಬದುಕಿ ಬಾಳದ ಪರಿಯಲಿ ಇನ್ನರಿತು ಮಾಳ್ಪುವೆನೆ
ನಿನ್ನಯ ಪರಮ ಸೇವೆಯನು ಎನ್ನ ಪ್ರಾಣೇಶನೆ ! ||ಮ||

ಲೋಕದೆದುರಿನಲಿ ನಗೆಗೇಡಿಯಾಗಿ ಕಾಲದ
ಪಾಕದಲಿ ಮನವ ತೆತ್ತು ದಿಕ್ಕೆಟ್ಟು ಬಳಲಿದೆ
ಮುಂದಾರಿಯನರಿತುಕೊಳಲಾರದೆ ತೊಳಲಿದೆನು
ಸಂತತ ಪರಮ ಪ್ರಾಣೇಶನೇ ಬಂದು ಪೊರೆಯೊ ! ||ಮ||

— ೦ —

## ಲಾಲಿಸುತೆನ್ನ....

ಲಾಲಿಸುತೆನ್ನ ಮನದ ಬೇಡಿಕೆಯನು
ಅರಳಿಸೆನ್ನಯ ಮನಮತಿಗಳನು
ಬಿರಿದ ಹೂಗಳ ತೆರದಿ ಹೇ ಅಂತರಾತ್ಮ !

ನಿನ್ನನು ಭಕ್ತ ಪ್ರಿಯನೆಂಬರು
ಸಂಗೀತ ಪ್ರಿಯನೆಂಬರು ಮತ್ತೆ
ಲೋಕ ಪ್ರಿಯನೆಂಬರು ಅಂತರಾತ್ಮ ! ||ಲಾ||

ಮತ್ತೇಕೆ ನೀನೆನ್ನ ಕಂಡಿದ್ದು
ಕಾಣದೊಲ್ ಅಲಕ್ಷಿಸುತಿಹೆ ದೇವ ?
ನರಳಿ ನೊಂದಿಹೆ ನಾನು ಅಂತರಾತ್ಮ ! ||ಲಾ||

ನಿನ್ನ ಪರಮ ಸೇವೆಯನು ಬಯಸಿಹೆ
ನಿನ್ನೊಂದು ಕಿರುವೆರಳ ಸೇವೆಯನು
ಅನುಗ್ರಹಿಸಿ ಪಾಲಿಸು ಅಂತರಾತ್ಮ ! ||ಲಾ||

— ೦ —

## ವೈಷ್ಣವರು....

ವೈಷ್ಣವರು ನಿನ್ನನೆಂಬರು ವಿಷ್ಣುವೆಂದು
ಶೈವರೆಂಬರು ಪರಮ ಶಿವನೆಂದು
ಜೈನರೆಂಬರು ತೀರ್ಥಂಕರನೆಂದು
ಆನೇನೆನ್ನಲಿ ಹೇ ಎನ್ನ ದೊರೆಯೆ.

ಅಪ್ರಮೇಯನು ನೀನು, ವರ
ಮಾಯಾತೀತನು ನೀನು, ಜಗತ್ ಸೃಷ್ಟಿ
ಕರ್ತನು ನೀನು. ನಿನ್ನನರಿತು
ಕೊಂಬೆನೇ ಆನೆನ್ನ ಕಿರು ಮತಿಯಲಿ. ||ವೈ||

ಚಿದಾನಂದಮೂರ್ತಿಯೆ ಬಲು
ಪ್ರಸನ್ನ ಚಿತ್ತನೇ ಸುಜ್ಞಾನ ನಿಧಿಯೇ
ದಿವ್ಯ ದೇವತಾ ಸ್ವರೂಪಿಯೇ ಶ್ರೀ
ಶ್ರೀ ಸರ್ವೇಶ್ವರನೇ ನಾನರಿವೆನೇ ನಿನ್ನ ? ||ವೈ||

ಹೇ ದೇವಾಧಿದೇವನೇ ನಿನ್ನ
ಮುದ್ದು ಚರಣ ಕಮಲಂಗಳಿಗೆ ಶಿರವ ಮಣಿಸು
ಬೇಡುವೆನ್ನೈ ಪರಮ ದಯಾ
ಮೂರ್ತಿಯೇ ನಿತ್ಯ ಪ್ರಾಣನಾಥ ನೀನೆಂದು. ||ವೈ||

— ೦ —

# ಅಪಾರ ಕವಿ ಕಾವ್ಯ....

ಅಪಾರ ಕವಿ ಕಾವ್ಯ ಸಮುದ್ರವ
ಜಗದೀಶ ನೀನಲ್ಲದೆ ಸೃಷ್ಟಿಸುವ
ಶಕ್ತಿದಾತಸಿನ್ನಾರ್ ಈ ಧರಣಿಯಲಿ ?

ದೇವಾಧಿದೇವ ನಿನ್ನನೆ ನಂಬಿ
ಕಾವ್ಯ ಸೇವೆ ಗೈಯ್ಯಲೆಂದಾನು
ಆದೇಶವನ್ನೆದುರು ನೋಡುತಿಹೆ. ||ಅ||

ನೀ ನಡೆಸಿದಂತೆ ನಾನು ನಡೆಯುವೆ
ನಿನ್ನ ಆದೇಶವೆ ಜಗದ ನಿಯಮ
ನಿನ್ನ ನಿರೂಪಣೆಯೆ ರಸಕಾವ್ಯ. ||ಅ||

ನೀನೆ ಸೃಷ್ಟಿದಾತ ನೀನೆ ವೀರ್ಯ
ಶೌರ್ಯಗಳ ಪ್ರಾಧಿಕಾರಿ ಸಾರ್ವ
ವಿದ್ಯೆ ಬುದ್ಧಿಗಳ ವೀರರಸಕಾರಿ
ನೀನೇ ಆದೇಶಿಸೆನ್ನನನವರತ. ||ಅ||

— o —

## ರಘುಕುಲ....

ರಘುಕುಲತಿಲಕ ಶ್ರೀ ದಶರಥರಾಮನ
ಪುಣ್ಯ ನಾಮಾವಳಿಯು ತನು ತುಂಬಿ
ನೀ ಭಜಿಸು ನಿತ್ಯ ನಿರಂತರ ಮನವೆ.

ನೀರಮೇಲಿನ ಗುಳ್ಳೆಯಂದದಲಿ
ಮೂಡಿ ಮಾಯವಾಗುವ ದೇಹವನು
ನೆರೆ ನಂಬಿ ಭವ ಬಹಳಾರ್ಣವದೊಳಗೆ
ಮುಳುಗಿ ಏಳಲಾರದೆ ಪರಿತಪಿಸುವರೆ
ನೀ ಭಜಿಸು ನಿತ್ಯ ನಿರಂತರ ಮನವೆ. ||ರ||

ನಿತ್ಯ ಬಾಳುವೆಯು ಹುರುಳೇನು ಮನದಿ
ಯೋಚಿಸಿ ನೀ ನೋಡೆಲೆ ಗಾಳಿಗೊಡ್ಡಿದಾ
ಸೊಡರಿನಲಿ ಸಂಸಾರದೇಳಿಗೆಯು
ಬಯಸುವರೆ ರಾಮನೊಳಿಗವ ತೊರೆದು ?
ನೀ ಭಜಿಸು ನಿತ್ಯ ನಿರಂತರ ಮನವೇ. ||ರ||

— ० —

## ಹಗಲಿರುಳು....

ಹಗಲಿರುಳು ರಾಮ ರಾಮ ರಘುರಾಮ ಪರಮ
ಸತ್ಕೀರ್ತಿ ರಾಮಾ ಎಂದು ನೆನೆ ಮನವೇ.
ರಾಮಾಭಿರಾಮ ಲೋಕಾಭಿರಾಮನ ದಿವ್ಯ
ಚರಿತ್ರೆಯನು ಮರೆಯಲುಂಟೇ ಈ ಭವದಿಯಲಿ ?

ಸತ್ಯಸಂಧನ ಪಿತೃವಾಕ್ಯ ಪರಿಪಾಲಿಸಿದ
ದೇವವರ್ಯನ ನೆನೆದು ಹರಿಸಿರೊ ಭವರೋಗವ.
ರಾಮ ರಾಜ್ಯದಲಿ ಬಾಳಿ ಕಾಮನೆಯ ಕೊಳದಲಿ
ಈಸುವರೆ ಮರುಳೆ ರಾಮಪಥದಲಿ ಕಾಣಿರೊ ಸದ್ಗತಿಯ ||ಹ||

ರಾಮ ರಾಮ ಜಾನಕೀರಾಮ ಎಂದು ನಿತ್ಯ
ಕುಳಿತಲ್ಲಿ ನಿಂತಲ್ಲಿ ಕಾಯಕವ ಮಾಳ್ಪಲ್ಲಿ
ಸುಲಭ ನಾಮನ ಎಡೆವಿಡದೆ ನೆನೆಯುತಿರು
ರಾಮನಾಮವೇ ಸದ್ಗತಿಯ ಬುತ್ತಿ ಜನ್ಮಜನ್ಮಕೆ. ||ಹ||

— ० —

# ಕೇಳಯ್ಯ ದಾಶರಥಿ....

ಕೇಳಯ್ಯ ದಾಶರಥಿ, ಪರಮುದಯದಿಂದ
ನಾನೊಂದು ಕಂಬನಿ ತುಂಬಿದ ಮರಿನೋಡ
ದು:ಖವೇ ನನ್ನ ಹೆತ್ತ ತಂದೆ ತಾಯಿಯರು
ದುಃಖವೇ ನನ್ನ ಜೀವನದ ಜಾಯಮಾನ
ದು:ಖದಲಿ ತೊಳೆಯುವೆ ತವಪಾದ ಪದ್ಮಗಳ.

ಪರಾಮರಿಸೆನ್ನ ಒಡಲ ದು:ಖವ ಮನವಿಟ್ಟು
ಮತ್ತೆನ್ನ ದು;ಖಭರಿತ ಜೀವ ಧ್ವನಿಯ ಕರುಣಾಳು !
ಎನ್ನೆಲ್ಲ ದುಃಖವನು ಪ್ರಾಂಜಲಿ ತುಂಬಿ ಪರಿಚಯಿಸುವೆ.
ನಿನ್ನ ಪದಯುಗ್ಮಗಳ ನೆರೆನಂಬಿ. ಚಿರನಂಬಿ.
ದೂರೀಕರಿಸದಿರೆನ್ನ ಪರಮ ದೇವ ಪ್ರಭುವೇ ! ||ಕೇ||

ಆನಿನಿನ್ನೇನೀವೆ ತವಪಾದಗಳ ಪುಷ್ಪಾರ್ಚನೆಗೆ
ವರ್ಣವರ್ಣಾಂತ ದುಃಖಭರಿತ ಪುಷ್ಪಗಳಲ್ಲದೆ
ತವಸುಖ ಮಜ್ಜನದ ಅಭಿಷೇಕ ವಾರಿಧಿಗೆ
ಎನ್ನೊಡಲಿನ ಶೋಕರಸವಲ್ಲದೇನಿಹುದು
ಹೇ ಎನ್ನ ಪ್ರಾಣವಲ್ಲಭ ರಾಮಾಭಿರಾಮನೆ ! ||ಕೆ||

— ೦ —

# ಕಣ್ತುಂಬ ಕಂಡೆ....

ಕಣ್ತುಂಬ ಕಂಡೆ ನಾ ರಘುವರನ
ಮನ್ಮನದಲಿ ನೆನೆಯುತ ತನುತುಂಬಿ
ಭವರೋಗವ ತೊಡೆವೆ ಪರಿಪಾಹಿಮಾಂ.

ಶ್ರೀರಾಮನಾಮವ ಬಿಡದೆ ಜಪಿಸದೆಯೆ
ಪಾಪರಾಶಿಯ ತೊಡೆಯಲಾದಪುದೆ ದೊರೆಯೆ.
ಜನ್ಮಜನ್ಮಾಂತರದಿಂದ ಕಾಪಿಟ್ಟ ನೀನು
ಇಂದು ಕೈಬಿಡುವರೇ ಪರಿಪಾಹಿಮಾಂ. ||ಕ||

ಲೋಕಪೂಜ್ಯನ ರಘುಕುಲತಿಲಕನ
ಭಜಿಸುತೊಮ್ಮೆ ನಮಿಸುತೊಮ್ಮೆ ನಿತ್ಯ
ಎಡೆವಿಡದ ಪರಿಯಲಿ ಆಪನಿತು ನೆನೆದು
ದುರಿತಕೋಟಿಯು ಕಳೆಯುವೆ ಪರಿಪಾಹಿಮಾಂ. ||ಕ||

ಬಾಳಿನ ಕೊನೆಯ ಚಣದವರೆಗೂ ನಿನ್ನ
ಪವಿತ್ರ ನಾಮಾವಳಿಯ ನೆನವಿರಲಿ ಪ್ರಭುವೇ !
ಮನಮರೆಸಿ ತಳ್ಳದಿರೆನ್ನನು ಘೋರ
ನರಕದ ಕೂಪಕೆ ದೇವಾ ಪರಿಪಾಹಿಮಾಂ. ||ಕ||

— ೦ —

## ರಾಮು ರಘುರಾಮು....

ರಾಮು ರಘುರಾಮು ಲೋಕಾಭಿರಾಮು
ಕೌಸಲ್ಯಾನಂದನ ಶ್ರೀ ಸೀತಾರಾಮು.

ಹೃದಯದ ಹೊಂಗಳಸದಲಿ ಅಕ್ಕರೆಯು
ಸಕ್ಕರೆ ತನಿರಸವ ತುಂಬಿ ಸತ್ಯಧರ್ಮದ
ಅಮೃತರಸದಿ ಮನ ತುಂಬಿ ತನುವಿನಲಿ
ಲೋಕಪ್ರಿಯ ಶ್ರೀರಾಮನ ತುಂಬುವೆ ಪಾಹಿಮಾಂ ||ರಾ||

ಪ್ರಜಾಪತಿಯೆನಿಸಿದ ಪರಮ ದಯಾನಿಧೆ
ಘೋರ ಅಸುರಾಂತಕ ಸುಜನ ಸಂರಕ್ಷಕ
ಭಕ್ತಜನ ಪೂಜಿತ ದೇವ ಪುರುಷೋತ್ತಮ
ನಮಿಪೆ ತವ ಪದಾಂಬೋಜಗಳಿಗೆ ಪಾಹಿಮಾಂ. ||ರಾ||

ಸೀತಾವಲ್ಲಭ ಪತಿತಪಾವನ ಶ್ರೀರಾಮು
ಜಗದೋದ್ಧಾರಕ ವೀರಾಧಿವೀರ ಹನುಮಪ್ರಿಯ
ದಾಶರಥಿ ಇಂದುವದನ ವರ ಸುಂದರಾಂಗ
ನಮಿಪೆ ತವ ಪದಾಂಬೋಜಗಳಿಗೆ ಪಾಹಿಮಾಂ ||ರಾ||

— o —

# ಶ್ರೀರಾಮ....

ಶ್ರೀರಾಮಾಭಿರಾಮ ಸದ್ಗುಣಧಾಮ ಸುರಸುಂದರ
ಪರಮಾನಂದ ರಘುಕುಲಲಲಾಮ ದಾಶರಥಿಯೆ
ನಮಿಸುವೆ ನಿನ್ನ ಪಾಹಿಮಾಂ ಪರಿ ಪಾಹಿಮಾಂ.

ಪರಮಾತ್ಮ ಪರೇಶ ! ಘೋರ ರಾಕ್ಷಸರ ಭಂಜಕ
ಚಂಪಾರಣ್ಯ ನಿವಾಸ ಶಶಿಕೋಟಿ ಕಿರಣಸಾಂದ್ರ
ಸೀತಾಪತೆ ಕರುಣಾಸಿಂಧು ದೀನ ಸಂರಕ್ಷಕನೆ
ನಮಿಸುವೆ ನಿನ್ನ ಪಾಹಿಮಾಂ ಪರಿಪಾಹಿಮಾಂ. ||ಶ್ರೀ||

ಇಂದು ವದನ ಸುರ ಸುಂದರಾಂಗ ಸಚ್ಚಿದಾನಂದ
ಸ್ವರೂಪ. ಅಯೋಧ್ಯಾರಾಜ ಕುಲತಿಲಕ, ನೀನೇ
ಅನಾಥ ಬಂಧು ! ಎನ್ನಯ ಕರಗಳ ಮುಗಿದು ಬೇಡಿ
ನಮಿಸುವೆ ನಿನ್ನ ಪಾಹಿಮಾಂ ಪರಿಮಾಹಿಮಾಂ. ||ಶ್ರೀ||

ಲೋಕದೋಳ್ ಎನಗಿಂತ ದೀನರಿಲ್ಲ ಪ್ರಭುವೆ !
ದೀನಾತಿದೀನ ಮೊರೆಯಲಿ ಬೇಡುವೆ ನಿನ್ನನು
ದುರಿತಕೋಟಿಯ ಕಳೆದು ಕರುಣದಿಂದಲೆನ್ನ
ಕಡೆಹಾಯಿಸು ಪಾಹಿಮಾಂ ಪರಿ ಪಾಹಿಮಾಂ. ||ಶ್ರೀ||

— ೦ —

# ಧನ್ಯನಾದೆ....

ಧನ್ಯನಾದೆ ಶ್ರೀರಾಮನ ಕಂಡು
ಧನ್ಯನಾದೆ ಸೀತಾಪತಿಯ ನೆನೆದು.

ಧರ್ಮವರೇಣ್ಯ ಶ್ರೀ ಮಂಗಳಾಂಗ
ಲಾವಣ್ಯ ಮೂರುತಿಯನು ಕಂಡು
ಧನ್ಯನಾದೆನು ನಾನು ಜನ್ಮಾಂತರದ
ಘನ ಪುಣ್ಯವಶದಿಂದ. ಶಿರಸಾ ನಮಿಸುವೆ. ||ಧ||

ವರ ಲಕ್ಷ್ಮಣಾಗ್ರಜನ ನೆನೆನೆನೆದು
ಪರಿ ಪಾವನ ಮೂರ್ತಿಯ ಘನ ಕಥನದ
ರಸಪಾನದಲಿ ಧನ್ಯನಾದೆನು ನಾನು
ರಘುಕುಲ ಸೋಮನ ಶಿರಸಾ ನಮಿಸುವೆ. ||ಧ||

ಗುಡಿಯಲ್ಲಿ ಕಂಡು ಧನ್ಯನೆಂದುಕೊಂಡರೆ
ಈ ಜನ್ಮ ಸಾರ್ಥಕತೆಯೆ ಪರಮಾತ್ಮನೇ !
ನಿನ್ನ ಪ್ರತ್ಯಕ್ಷ ಕಣ್ತುಂಬ ಕಾಂಬೊಂದು
ದಿವಿನಾದ ದರುಶನವ ನೀಡು ಪರಮಾತ್ಮನೇ ! ||ಧ||

— ० —

## ಲೋಕವೆಲ್ಲ....

ಲೋಕವೆಲ್ಲ ಶ್ರೀರಾಮ ನಾಮವನು
ಚಂದದಿಂದ ಭಜಿಸುತಿದೆ ಎಡೆವಿಡದೆ.
ನೀನೇಕೆ ಸುಮ್ಮನಿರುವೆ ಮನವೇ !

ಸ್ಮರಣೆಯೊಂದೇ ಸಾಕು, ತನುಮನಗಳ
ದುರಿತವ ತೊಳೆದು ಕ್ಲೇಶವ ಪೋಗಾಡೆ
ಅನವರತ ಶ್ರೀರಾಮನ ನೆನೆ ಮನವೇ ! ||ಲೋ||

ದೀನಬಂಧು ಪರಮ ದಯಾಸಿಂಧು
ರಘುಕುಲಪತಿಯನು ಭಕುತಿಯಿಂದ
ಜಡಿ ತುಂಬಿ ಸ್ಮರಿಸುತಿರು ಮನವೇ ! ||ಲೋ||

ಜಗದಭಿರಾಮ ಸೀತಾ ಮನೋಹರ
ದೇವ ಮನುಜನನು ಪರಮಾನುರಾಗದಿಂದ
ಸರ್ವತ್ರ ಸದಾ ನೆನೆಯುತಿರು ಮನವೇ ! ||ಲೋ||

— o —

# ಪತಿತೆ ನಾನು....

ಪತಿತೆ ನಾನು ಪತಿತ ಪಾವನನು ನೀನು
ಅರಿಯದೆ ಗೈದೆನ್ನ ಘೋರ ಅಪರಾಧಗಳ
ಮನ್ನಿಸಿ ದಯೆದೋರು ರಘುಕುಲಸೋಮ !

ಮರೆತೆನೆನ್ನಭ್ಯುದಯದಲಿ ನಿನ್ನನಂದು
ಅಂತ್ಯಕಾಲದಲಿಂದು ಮರೆವೆನೆ ತಂದೆ ?
ನೀನೆನ್ನನು ಮರೆಯದಿರು ಪ್ರಭುವೇ ! ||ಪ||

ಕರಮುಗಿದು ಬೇಡುವೆ ತವ ಚರಣ
ಎನ್ನ ಘೋರ ದುರಿತವ ತರಿದು
ಮಂದಮತಿಯನುದ್ಧರಿಸು ರಾಮಚಂದ್ರನೆ ! ||ಪ||

ಮತಿಹೀನ ನಾನು ನಿನ್ನ ದೇವತ್ವವನು
ಅರಿಯಲಾರದೇ ಹೋದೆ ರಾಘವೇಂದ್ರನೇ !
ಇಂದು ನಿನ್ನ ನೆನೆನೆದು ಪರಿತಪಿಸುತಿರೆ
ಪಾಹಿಮಾಂ ಪರಿ ಪಾಹಿಮಾಂ. ||ಪ||

— ೦ —

# ರಾಮಾಭಿರಾಮ....

ರಾಮಾಭಿರಾಮ ರಘುಕುಲತಿಲಕ
ಸೀತಾ ಮನೋಹರ ದೀನ ದಯಾಕರ
ಪಾಹಿಮಾಂ ಪ್ರಭುವೇ !

ಕಡು ಕತ್ತಲೆಯ ಜಾಡಿನಲಿ ಅಲೆದು
ಮುಂಗಾಣದೆ ದಣಿದಿಹೆನು ತತ್ತರಿಸಿ
ದಯಾಘನ ಎನ್ನ ದುರಿತವನೆಲ್ಲ
ಮನಗೊಳದೆ ಕ್ಷಮಿಸು ಸೀತಾರಾಮ
ಪಾಹಿಮಾಂ ಪ್ರಭುವೇ !

ಹೇ ದೇವ ಮಾನವನೆ ತಲೆಬಾಗಿ
ನಮಿಸುವೆ ತವ ಪದಾಂಬೋಜಗಳಿಗೆ
ದಿವ್ಯ ದರುಶನವ ನೀಡಿ ದಯೆಯಿಂದ
ಸಲಹೆನ್ನ ದೀನ ಮೊರೆಯನು ಕೇಳಿ
ಪಾಹಿಮಾಂ ಪ್ರಭುವೇ !

— ೦ —

# ಮೌನ ಪೂಜೆ....

ಮೌನಪೂಜೆ ನಡೆಸಿಹೆನನುದಿನ ನಿನ್ನ
ಪಾದಾರವಿಂದವ ನೆನೆನೆನೆದು ರಾಮ
ಎಂಬೆರಡಕ್ಷರವ ಎದೆಯಲಿ ಕೊರೆದು.
ಹೇ, ಸೀತಾರಾಮ ಕರುಣಿಸೆನ್ನ.

ರಾಮರಾಮಾ ಸೀತಾರಾಮಾ ಎನುತೆ
ಎದೆಯ ಬನದೊಳಾಂತಿಹೆ ಶ್ರೀರಾಮ
ಚರಿತ್ರವ ಭಯ ಭಕ್ತಿಗಳಿಂದಲಿ
ಹೇ, ಸೀತಾರಾಮ ಕರುಣಿಸೆನ್ನ. ||ಮೌ||

ಮಾನಸ ಪೂಜೆಯಲಿ ಸಲ್ಲಿಸುವೆ ದೇವ
ಎನ್ನಾತ್ಮ ನಿವೇದನೆಯನು ದುಃಖ
ಸಂಕಟದ ಭಾರದಿಂದ ತನುಮನ ತುಂಬಿ
ಹೇ, ಸೀತಾರಾಮ ಕರುಣಿಸೆನ್ನ. ||ಮೌ||

— o —

# ಸಂಸಾರ....

ಸಂಸಾರ ಸಾಗರವ ಈಸಲಾರೆನೊ ಭಂಗ
ಬವಣೆಗಳ ನುಂಗಿ. ನಿನ್ನಂಘ್ರಿ ಕಮಲವ ಹಿಡಿದು
ನಮಿಸಿ ಭಜಿಸಿ ಪಾಡಿ ಪೊಗಳುವೆನು ಸಿರಿದೊರೆಯೇ !

ಹೆತ್ತೊಡಲಿಗೆ ಸಾಂತ್ವನವ ನೀಯದ ಬದುಕಿಗೆ
ಸುಖ ಶಾಂತಿಯಿಲ್ಲ. ಕಡು ಕಷ್ಟದಲಿ ನೊಂದಿಹೆನೈ
ನೀರಜ ನಯನಾ ನಮಿಪೆನೊ ನಿನ್ನ ಕಾಲ್ವಿಡಿದು.

ಗಳಿಗೆಯೊಂದು ಯುಗವಾಗಿ ಪುಳುವಿನೊಲ್ ಭವದಿಯ
ಕೆಸರಲಿ ಮುಳುಗಿ ಸ್ವಾಮಿಯೆನ್ನ ಶ್ರೀರಾಮನೆಂದು
ಬೇಡುತಲಿರುವೆ ನಿನ್ನ ಅನುದಿನವು ರಘುರಾಮ !

ಧನಕನಕ ಐಶ್ವರ್ಯಾದಿಗಳನು ನಾನಿನ್ನ ಕಾಡಿ
ಬೇಡಲೊಲ್ಲೆನಯ್ಯಾ. ನಿನ್ನ ದಿವ್ಯ ಸೇವೆಯೇ
ಸಾಕೆನೆಗೆ. ಕರುಣದಿಂದಿತ್ತು ಹರಸು ಪ್ರಭುವೇ !

— ೦ —

# ರಾಮನೆ ದೈವ....

ರಾಮನೆ ದೈವ ರಾಮನೆ ಸರ್ವಸ್ವ ಶ್ರೀರಾಮನ
ನೋಡೋಣ ಬನ್ನಿರೋ ಶ್ರೀರಾಮ ಧಾಮಕ್ಕೆ.

ಬದುಕಿ ಭವರೋಗದಲಿ ಸಿಲ್ಕಿ ತೊಳಲಿ ಬಳಲಿದೆ
ಅರಣ್ಯರೋದನವಾಯ್ತೆನ್ನಯ ದುಃಖ ಸಂಕಟ.
ಶ್ರೀರಾಮನೇ ಪರದೈವ ಲೋಕಕ್ಕೆ ಶ್ರೀರಾಮನ
ನೋಡೋಣ ಬನ್ನಿರೋ ಶ್ರೀರಾಮ ಧಾಮಕ್ಕೆ. ||ರಾ||

ಈ ಭವದಿಗೆಳತಂದೆನ್ನ ಕಡು ಸಂಕಟದ
ಸಾಗರದೊಳಗದ್ದಿತು ವಿಧಿ, ನಾ ಬಯಸಿ ಬರಲಿಲ್ಲ.
ಶ್ರೀರಾಮನಲ್ಲದೆಯೆ ಬೇರಿಲ್ಲ. ಶ್ರೀರಾಮನ
ನೋಡೋಣ ಬನ್ನಿರೋ ಶ್ರೀರಾಮಧಾಮಕ್ಕೆ. ||ರಾ||

ನೀ ಪರಾಮರಿಸು ದಯದಿಂದ ದೀನೆಯೆನ್ನುತೆ
ಕೈಹಿಡಿದು ನಡೆಸು ಕತ್ತಲೆಗವಿಯಿಂದಲೆನ್ನ
ಶ್ರೀರಾಮನ ಬೇಡದನ್ಯವಿಲ್ಲ ಶ್ರೀರಾಮನ
ನೋಡೋಣ ಬನ್ನಿರೋ ಶ್ರೀರಾಮ ಧಾಮಕ್ಕೆ. ||ರಾ||

— o —

# ರಘುರಾಮು ಹರೇ....

ರಘು ರಾಮು ಹರಿ ಜಯರಾಮು ಹರೇ !
ಜಯ ಜಯ ಜಯ ಸೀತಾರಾಮು ಹರೇ !

ಕೈ ಮುಗಿದು ಬೇಡುವೆ ನಿನ್ನ ಕರುಣ
ಸಾಗರಾ ಪರಮ ದಯಾಕರ. ನೀಡು
ನಿನ್ನಯ ದರುಶನವ ದೀನೆಯೆನಗೆ. ||ರ||

ಲೋಕವೆಲ್ಲ ನೆನೆಯುತಿಹುದು ನಿನ್ನ
ಯುಗಯುಗಾಂತರದಿಂದ ಪಾಡಿ ಪೊಗಳಿ
ನೀನೆ ಬಂದು ಕಾಯಬೇಕು ದೀನಬಂಧು ! ||ರ||

ಭವದಿಯ ಘೋರ ಜಂಜಡದಲಿ ಸಿಲ್ಕಿ
ನಿನ್ನ ನೆನೆಯದಾದೆ ಮತಿಗೇಡಿ ನಾನು.
ದೀನ ರಕ್ಷಕ ಕೈಹಿಡಿದು ನಡೆಸೆನ್ನ. ||ರ||

— ೦ —

# ರಘುಕುಲ....

ರಘುಕುಲತಿಲಕ ಶ್ರೀ ದಶರಥರಾಮನ
ಪುಣ್ಯ ನಾಮಾವಳಿಯು ತನುತುಂಬಿ
ನಿತ್ಯ ನಿರಂತರ ಭಜಿಸು ನೀ ಮನವೇ !

ನೀರಮೇಲಿನ ಗುಳ್ಳೆಯಂದದಲಿ
ಮೂಡಿ ಮಾಯವಾಗುವ ದೇಹವನು
ನೆರೆ ನಂಬಿ ಭವ ಬಹಳಾರ್ಣವದೊಳಗೆ
ಮುಳುಗಿ ಏಳಲಾರದೆ ಪರಿತಪಸುವರೆ
ನಿತ್ಯ ನಿರಂತರ ಭಜಿಸು ನೀ ಮನವೇ ! ||೨||

ನಿತ್ಯ ಬಾಳುವೆಯು ಹುರುಳೇನು ನಿನ್ನೊಳು
ಯೋಚಿಸಿ ನೀ ನೋಡೆಲೆ. ಗಾಳಿಗೊಡ್ಡಿದಾ
ಸೊಡರಿನಲಿ ಸಂಸಾರದೇಳಿಗೆಯನು
ಬಯಸುವರೆ ರಾಮನೊಳಿಗವ ತೊರೆದು ?
ನಿತ್ಯ ನಿರಂತರ ಭಜಿಸು ನೀ ಮನವೇ ||೨||

— ೦ —

# ಓ ದೇವ....

ಓ ದೇವ ಮನೋಹರ ರಘುವೀರ
ಅಯೋಧ್ಯಾಪತಿ ನಿಗಮಗೋಚರ
ದೀನ ಬಂಧೊ ಪರಮ ಕರುಣಾಕರ.
ನಿನ್ನ ಪದಾಂಬೋಜಗಳಿಗೆ ನಮಿಸುವೆ.

ಕೌಸಲ್ಯಾನಂದನ ಪರಮಾನಂದ.
ಕುಂದ ಕುಟ್ಮಲಧರ ಸೇತುಬಂಧನ.
ನಿರ್ಮಲ ಚಿತ್ತ ವರ ಪರಮಾನಂದ
ನಿನ್ನ ಪದಾಂಬೋಜಗಳಿಗೆ ನಮಿಸುವೆ ||ಓ||

ಸತ್ಯಸಂಧ. ನಿತ್ಯ ವೇದಗಮ್ಯ.
ಅಖಿಲ ಮುನಿಕುಲ ಮಂಗಲ ಧಾಮ.
ಏಕೈಕ ಧೀರಾತಿಧೀರ ದಾಶರಥಿ.
ನಿನ್ನ ಪದಾಂಬೋಜಗಳಿಗೆ ನಮಿಸುವೆ. ||ಓ||

— o —

# ಶ್ರೀರಾಮ....

ಶ್ರೀರಾಮ ರಘುರಾಮ ಜಯರಾಮ
ಕೃಪಾಳು ಪರಮಾತ್ಮನ ನೆನೆ ಮನವೇ.
ಅಯೋಧ್ಯಾಧಿಪತಿ ಜಾನಕೀರಾಮ
ರಾಮಾಭಿರಾಮನ ಭಜಿಸು ಮನವೇ.

ಸತ್ಕೀರ್ತಿ ಮಾಲಾಧರ ರಘುವೀರ
ಘನ ಶ್ಯಾಮ ಸುಂದರನ ನೆನೆ ಮನವೇ.
ಭಕ್ತ ಜನರ ಮನದಿಷ್ಟಾರ್ಥವ ಮಿಗೆ
ಸಲಿಸುವ ಲೋಕವಂದ್ಯನ ನೆನೆ ಮನವೇ. ||ಶ್ರೀ||

ಕಮಲಲೋಚನ ಅಮಿತ ವಿಕ್ರಮಗಮ್ಯ
ನೀನೆಂದು ಧ್ಯಾನಿಸುತ ನೆನೆ ಮನವೇ.
ಎನಗಿಲ್ಲ ಸನ್ಮತಿ ಸುಗುಣಗಣವ
ಬೆಳಿಸೆ ತನುದಣಿಯೆ ನೆನೆ ಮನವೇ. ||ಶ್ರೀ||

— ೦ —

# ಇಹಪರಗತಿ....

ಇಹ ಪರಗತಿ ನೀನೇ ಜಾನಕೀರಮಣ  ನೀನಿಲ್ಲದೆ
ಬೇರಾರಿಹರಯ್ಯ ಎನಗೆ ನಂಬಿದೆ  ನಿನ್ನಯ ಚರಣ.

ಬಂಧು ಬಳಗವಿಲ್ಲ, ತಂದೆತಾಯಿಯರೆನಗಿಲ್ಲ.
ಕರುಣದಿಂ ಕಂಡು ಮರುಗುವರಿಲ್ಲ  ನೀನೆನ್ನ
ಪರಮ ಬಂಧು. ಹೇ ಎನ್ನಯ ದೇವರ ದೇವಾ !  |ಇ||

ಮನುಕುಲದಲಿ ಸಂಜನಿಸಿ ದಾನವ ನೀತಿಯಲಿ
ನರಳಿ ಬಳಲಿ ಈಸುತಿಹೆ ಕಂಬನಿ  ಕಡಲಲಿ.
ನೀನೇ ಸಲಹೆನ್ನ ದಾಶರಥಿ ಶ್ರೀ ರಘುಕುಲತಿಲಕ !  ||ಇ||

ಎನ್ನ ರಕುತ ಮಾಂಸಗಳನೆ ಸುರಿಸುರಿದು ಸತತ
ಪರ ಸೇವೆಯನು ಗೈದು ದುಃಖ ಕ್ಲೇಶವನು ಪಡೆದೆ.
ಅಕಟಕಟ ಮರುಗುವವರ ಕಾಣೆನು  ಸಿರಿದೊರೆಯೆ.  ||ಇ||

ಏಂ ಗೈದೊಡೇನು ? ಭವದಿಯ ಕೂರ ಮೊಸಳೆಗಾನು
ಆಹಾರವಾಗುತಿಹೆ ನೋಳ್ಪುವವರ  ಕಣ್ಣೆದುರಿನಲಿ
ನೀನೇ ಗತಿಯೆನಗೆ ಶ್ರೀ ಅಯೋಧ್ಯಾಪತಿಯೆ !  ||ಇ||

— ೦ —

# ರಾಮ ರಾಮ....

ರಾಮರಾಮ ರಘುರಾಮ ಸೀತಾರಾಮ
ದಶರಥ ರಾಮನ ಘನಪುಣ್ಯ ನಾಮಚರಿತನ
ಸರ್ವತ್ರ ಸದಾ ಭಕ್ತಿಯಿಂದಲಿ ನೆನೆ ಮನವೇ !

ಸೂರ್ಯಚಂದ್ರಾರ್ಕ ಕೀರ್ತಿಶಾಲಿ ರಘುರಾಮನ
ಸತ್ಕೀರ್ತಿಗೆ ಅಳಿವಿಲ್ಲ. ರಾಮರಾಮಾ ಎನುತೆ
ಶ್ರೀರಾಮನಾಮವ ದಿವಿನಾಗಿ ನೆನೆ ಮನವೇ ! ||ರಾ||

ನಾಮಸ್ಮರಣೆ ಮಾತ್ರದಿಂದ ಪರಿಹರಿವುದು
ಪ್ರಾಣ ಸಂಕಟ. ಸಚ್ಚಿದಾನಂದ ಸ್ವರೂಪ
ತ್ರಿಲೋಕ ಪ್ರಿಯ ಪರಮಾತ್ಮನ ನೆನೆ ಮನವೇ ! ||ರಾ||

— o —

# ರಘುಕುಲ ತಿಲಕ....

ರಘುಕುಲ ತಿಲಕ ನಯನಾಭಿರಾಮ ಘನಶ್ಯಾಮ
ಪರಿ ಪುಣ್ಯನಾಮಗುಣ ಧಾಮ ಸೀತಾರಾಮ.

ಹದವರಿತು ಭಜಿಸುವೆನು ನಿನ್ನ ಅನವರತವು
ಪರಿಪುಣ್ಯ ನಾಮಾವಳಿಯ ಪರಮ ಪುರುಷನೇ !

ರಾಮನಂ ನೀಲಮೇಘ ಶ್ಯಾಮನಂ ನಿತ್ಯ
ಎಡೆಬಿಡದೆ ಮುಕ್ತ ಭಾವದಿಂ ನೆನೆ ಮನವೇ ! ||ರ||

ಭಜಿಸು ಮನವೇ ಭಯ ಭಕ್ತಿಯಿಂದಲಿ
ಘೋರ ದುರಿತಗಳು ಹರಿದು ಹೋಗುವತನಕ ! ||ರ||

ಭಜಿಸು ಭಜಿಸು ಎದೆ ತುಂಬಿ ಭಜಿಸು
ನಿತ್ಯ ನಿರಂತರ ದನಿ ದಣಿವನ್ನ ಹೇ ಮನವೇ ! ||ರ||

— ೦ —

# ಹೇ ವಿಶ್ವಜಗತ್....

ಹೇ ವಿಶ್ವಜಗತ್ ಪ್ರಕಾಶ! ನೀನು ಬೆಳಗು !
ನನ್ನೊಳಗನು ದಿವಿನಾಗಿ ಬೆಳಗಿ ತೊಳಗಿಸು.
ದುರಿತಕೋಟಿಯನು ತುಳಿದು ನನ್ನವನಾಗು !

ನನ್ನ ಏಕಮಾತ್ರ ಪಿತನಾದ ನೀನೆ ಪರವಸ್ತು.
ನನ್ನ ಅಬೋಧಮತಿಗೆ ನೀನೆ ಸದ್ಬೋಧೆಯಾಗು
ಎನ್ನ ಪ್ರಾರ್ಥನೆಯನು ಹೃದಯದಿಂದ ನಿವೇದಿಸುವೆ.

ನನ್ನೆಲ್ಲ ಕರ್ಮಕಾಂಡದ ಗಭೀರತವು ಶಾಶ್ವತ
ಗೌರವಾನ್ವಿತ ಉತ್ಸವದ ಮಹಾ ಅಧಿಪತಿ ನೀನು.
ನೀನೆನ್ನ ಪ್ರವೃತ್ತಿಯ ಘನತರ ಪ್ರಾಧಿಕಾರಿ.

ಸಂಗೀತ ರಸಾಯನದ ಹೂಮಾಲೆಗಳಿಂದ
ಉದ್ಘೋಷಗೊಳಿಸುವ ಆನಂದೋತ್ಸವ ಇದು.
ವಿಶ್ವ ಪ್ರೇಮದಲಿ ನೀನಲ್ಲದೆ ಇನ್ನೊಬ್ಬರುಂಟೆ ?

ನೀನೆ ಆನಂದೋತ್ಸವದ ಮಹಾ ಅಧಿಪತಿ !
ಪ್ರತಿ ಪ್ರವೃತ್ತಿಯ ಉತ್ಸವನು ಸಫಲಗೊಳಿಸು.
ಆವಿರ್ಭೂತನಾಗು ನಿನ್ನ ಸುಂದರ ವದನವಿಂದು
ಪ್ರಕಾಶಿತವಾಗಲಿ ಪ್ರಭುವೇ !

— o —

ಆತ್ಮ ಗೀತಾಂಜಲಿ–೧೩೧

# ಭುವನಂ....

(ಜೀವನ ಕುಸುಮದಿಂದ)
(ಅಥಾರಿತ)

ಭುವನಂ ಸುಂದರಂ ಗಗನಂ ಸುಂದರಂ
ಚಂದಿರಂ ಸುಂದರಂ ಸವಿತೃಂ ಸುಂದರಂ
ತ್ರಿಲೋಕಾಧಿಪತೇ ಸಕಲಂ ಸುಂದರಂ.

ಲೋಚನಂ ಸುಂದರಂ ಲೋಕನಂ ಸುಂದರಂ
ಶರೀರಂ ಸುಂದರಂ ಹರಣಂ ಸುಂದರಂ
ತ್ರಿಲೋಕಾಧಿಪತೇ ಸಕಲಂ ಸುಂದರಂ. ||ಭು||

ಜೀವನಂ ಸುಂದರಂ ಭಾವನಂ ಸುಂದರಂ
ಚಿಂತನಂ ಸುಂದರಂ ಮಂಥನಂ ಸುಂದರಂ
ತ್ರಿಲೋಕಾಧಿಪತೇ ಸಕಲಂ ಸುಂದರಂ ||ಭು||

ಜಲಜಂ ಸುಂದರಂ ವನಜಂ ಸುಂದರಂ
ವದನಂ ಸುಂದರಂ ವಚನಂ ಸುಂದರಂ
ತ್ರಿಲೋಕಾಧಿಪತೇ ಸಕಲಂ ಸುಂದರಂ. ||ಭು||

— o —

# ಬೃಹದ್....

ಬೃಹದ್ ಬ್ರಹ್ಮಾಂಡದೊಡೆಯನ ಏನೆಂದು ಪೊಗಳಲಿ ?
ಏನೆಂದು ಬಣ್ಣಿಸಲಿ ಎನ್ನ ಜ್ಞಾನಕದು ಅಳವೇ ಸ್ವಾಮಿಾ ?
ನಿನ್ನಿರುವನರಿಯದೆ ನಿನ್ನ ರೂಪವ ಕಾಣದೆ ಎಂತು ಭಜಿಸಲಿ ?

ನಿನ್ನ ಹರಿ ಎಂಬರು ಹರ ಎಂಬರು ವಿಧಿ ಎಂಬರು
ಆನರಿಯೆ ವಿಷ್ಣುವೋ ಬ್ರಹ್ಮನೋ ಹರಿಹರನೊ
ನೀನೆಂತಾದರು ಇರು ಏನಾದರು ಆಗಿರು ದೇವನೇ ! ||ಬೃ||

ನಾ ಭಜಿಪುದು ನಿನ್ನನು ಸರ್ವಜ್ಞ ದೇವನೆಂದು
ಆಪನಿತು ಭಜಿಸುವೆ ಆಪನಿತು ಧ್ಯಾನಿಸುವೆ
ನಿನ್ನ ಮನ ಮುಟ್ಟೆ ಭಕ್ತಿರಸ ತುಂಬಿ ಸರ್ವೇಶನೆ !
ನಮಾಮಿ ಶಿರಸಾ ನಮಾಮಿ ||ಬೃ||

— o —

## ಬೇಡುವೆ....

ಬೇಡುವೆ ನಿನ್ನ ದೀನ ಜನೋದ್ಧಾರ
ಸುಗುಣಶೀಲ ಭಕ್ತಜನ ಮಂದಾರ
ಪರಿಪಾಲಿಸೆನ್ನನು ಕರುಣೆದೋರಿ.

ನಿನ್ನಯ ಕ್ರೀಡಾಂಗಣವೀ ಲೋಕ
ನಿನ್ನಾಟಿಕೆಗಳೇ ಪ್ರಾಣಿಲೋಕ
ಭವ್ಯ ಕರ್ಮ ಪ್ರವೃತ್ತಿಯೊಳ್ ಆರಾರ
ಗಣಿಸುವೆಯೊ ನಾನರಿಯೆ ಪರಮಾತ್ಮನೆ ! ||ಬೇ||

ನಿನ್ನ ಪೂಜಿಸಲೆಂದು ಅಲೆದಲೆದು
ಬನದಲಿ ವನಸುಮಗಳ ತರಿದು ತಂದು
ಪೂಜಿಸುತಿಹೆ ದಿನದಿನ ಎನ್ನಾತ್ಮವ
ದಿವ್ಯ ಕುಸುಮವಮರೆತು ಪರಮಾತ್ಮನೆ ! ||ಬೇ||

ನಾರದನಂತೆ ನಿನ್ನ ಸ್ತುತಿಸಲರಿಯೆ
ದೇವಕಿಯಂತೆ ಮಿಗೆ ಪ್ರೀತಿಸಲರಿಯೆ
ಎನ್ನೆದೆಯೊಳಿಹುದು ದುಃಖದ ರಸದೂಟಿ
ಅದನೆ ನಿನಗರ್ಪಿಸುವೆ ಪರಮಾತ್ಮನೆ ! ||ಬೇ||

— o —

# ಬೇಸರೊತ್ತಿದ....

ಬೇಸರೊತ್ತಿದ ಮುಸ್ಸಂಜೆ ಇರಲಿದು
ಕಾದಿರುವೆ ನಾನಿಂದು ನಿನಗಾಗಿ
ಬಾರೆನ್ನ ಪ್ರಿಯಕರ ಪರಮಾತ್ಮ !

ನೀಡೆಯಾ ನನಗಾಗಿ ದರುಶನವ
ನಿನ್ನ ಸಂಘವ ಬಯಸಿ ಬೇಡುತಿಹೆ
ನಿನ್ನ ಪ್ರೇಮವ ಸವಿನುಡಿಗಳ ಸಿಹಿ
ಜೇನಿನ ತನಿರಸವ ಸವಿದು ತಣಿಯೆ. ||ಬೇ||

ನೀ ಬಂದು ಕೂಡೆಯಾ ಎನ್ನಿನಿಯ
ಕೂಡಿ ಮಾತಾಡಿ ನಲಿದಾಡೆಯಾ ?
ರಮಿಸುತೆನ್ನ ಮನವ ನಲಿಸುತೆನ್ನ
ಪ್ರಾಣವ ಹಸನುಗೊಳಿಸಲಾರೆಯಾ ? ||ಬೇ||

ಮುಸ್ಸಂಜೆಯ ಕೆಂಗೆಂಪು ಹರಡಿದೆ
ಬಾನಿನಲಿ ಓಕುಳಿ ಬಳಿದ ಪರಿಯಲಿ.
ಜೆಂಬಿಸಿಲ ಹೊಂಗಾಂತಿಯಲಿ ಮಿಂದು
ಸುಂದರ ಬನದಿ ನಾವು ನಲಿಯುವಾ
ಬಾರಯ್ಯ ಪರಮಾತ್ಮ ಪ್ರಿಯಕರ ! ||ಬೇ||

— o —

# ಕೇಳೆನ್ನ....

ಕೇಳೆನ್ನ ದೀನಾತಿದೀನ ಮೊರೆಯ ಸಿರಿದೊರೆಯೆ
ಕಾಲ್ವಿಡಿದು ಬೇಡುವೆನೊ ನಿನ್ನ.

ಬಾಲ್ಯದಿಂದಿನ್ನೆಬರಂ ದುರುಳ ದುರುದುಂಬಿತನದಿ
ಮತಿಗೆಟ್ಟು ಮುಂಗೆಟ್ಟು ನಿನ್ನನು ಸಂಪೂರ್ಣ ಮರೆತು
ಪಾಪ ಪಂಕದಲಿ ಬಿದ್ದು ಕೊಳೆತು ನಾರುತಿಹೆ ದೇವ ! ||ಕೇ||

ನಿನ್ನ ಬೇಡಲಾರೆ ನಮಿಸಿ ಕೈ ಮುಗಿಯಲಾರೆ
ಹೇಸು ಜೀವನದಿಂದೆ ನಾಣ್ಚಿ ಕುಗ್ಗಿ ಕಮರಿರೆ,
ನೀನೇ ಪರಾಮರಿಸಿ ರಕ್ಷಿಸೆನ್ನನು ಪ್ರಭುವೇ ! ||ಕೇ||

ಧನ ಧಾನ್ಯಗಳ ಕಂಡೆನಿಲ್ಲ ಜಟಲ ಬಾಳಿನಲಿ
ದಯೆ ಕರುಣೆಗಳ ಪರಕೆಯಿಲ್ಲವೀ ಬಡ ಜೀವಕೆ
ಕಂಬನಿಯ ಕೂಳೇ ಗತಿ ದಿನನಿತ್ಯ ದೇವಾಧಿದೇವ ! ||ಕೇ||

ಬಾಳಿನ ಕೂರಗತಿ ಹೀರುತಿದೆ ರಕುತದ ಕಣಕಣವ
ನಿನ್ನ ನೆನೆವುದೊಂದೇ ಮನಕೆ ಶಾಂತಿರಸ ಚಣಚಣವು
ನೀ ಬಂದು ಸಲಹೆನ್ನ ಪರಮಾತ್ಮ ಪ್ರಿಯಕರನೇ ! ||ಕೇ||

— o —

# ಘೋರ ಅಪರಾಧ....

ಘೋರ ಅಪರಾಧಗಳು ಎನ್ನೊಳಿರುತಿರಲಾಗಿ
ಏನೆಂದು ಬೇಡುವೆನೊ ಶ್ರೀ ಪರಮ ಪುರುಷನೇ !
ಮೋಹ ಮದ ಮಾತ್ಸರ್ಯಗಳ ನಿತ್ಯ ಆಳಾಗಿ
ಮರುಳಾದೆನಯ್ಯ ಪಾಹಿಮಾಂ ಪರಿ ಪಾಹಿಮಾಂ.

ಕಾಮ ಕಾಮನೆಗಳ ಹಿರಿ ಪಾಶದಿ ಸೆರೆ ಸಿಲ್ಕಿ
ಕಂಗಾಲಾಗಿ ಮರೆತೆನಯ್ಯಾ ನಿನ್ನ ಪದಯುಗವ
ಹೇ ಎನ್ನ ದಿವ್ಯ ಪರಮಾತ್ಮ ಸ್ವರೂಪನೇ,
ನಿನ್ನೆಂತು ಅರಿವೆನೊ ಪಾಹಿಮಾಂ ಪರಿ ಪಾಹಿಮಾಂ. ||ಘೋ||

ರಜೋಗುಣಗಳ ಬೆಳೆಸಿ ನಿನ್ನನೇ ಮರೆತೆನಯ್ಯ
ಧನಕನಕಗಳಿಂದಲಿ ಮನದ ಸಿರಿಯ ತಗ್ಗಿಸಿ
ನಿನ್ನಿರುವ ಮರೆತು ನಾ ಮೆರೆದೆನೈ ಮರುಳಾಗಿ
ಇನ್ನೇಂಗೈಯಲಿ ಪಾಹಿಮಾಂ ಪರಿ ಪಾಹಿಮಾಂ. ||ಘೋ||

ಕರ್ತವ್ಯ ನಿಷ್ಠೆಯಿಲ್ಲದೆ ಸಮಯ ಪ್ರಜ್ಞೆಯನು
ಮರೆತು ಲೋಕದ ಬೆಡಗಿಗೆ ಮರುಳಾದೆನಯ್ಯಾ,
ಮತಿಗೆಟ್ಟು ದುಃಖದ ಮರಿಕಡಲಾಗಿ ಕಂಬನಿ
ಕುಂಡದಲಿ ಮುಳುಗಿದೆ ಪಾಹಿಮಾಂ ಪರಿ ಪಾಹಿಮಾಂ. ||ಘೋ||

— ೦ —

# ನಿನ್ನ ಭಜಿಸಲು....

ನಿನ್ನ ಭಜಿಸಲು ಗೀತಗಾನಗಳ
ಅರಿಯನ್ನೈ ನಲವಿಂ ಪೊಗಳಿ ಪಾಡೆ.
ಕಲಿವೆನೆನಲ್ ಗುರುವಿಲ್ಲ ಎನಗೆ
ತಿಳಿವೆನೆನಲ್ ಹಿರಿಯರಿಲ್ಲ ಕಲಿಸೆ,
ಮತ್ತಾರ್ ಕಲಿಪುವರು ಪೇಳ್.

ಅಕ್ಕರವ ಕಲಿಯೆ, ಅಕ್ಕರೆಯಿದ್ದೊಡಂ
ಒಲಿದು ಮಾನಿಸುವ ಪರಮ ಬಂಧುಗಳಿಲ್ಲ.
ಅಳ್ಕರೆಯ ನಿಜಜನನಿ ಇಲ್ಲವೆನಗೆ
ನೀನೆ ಗುರು, ನೀನೆ ತಾಯಿ ತಂದೆಯಿರೆ
ಮತ್ತಾರ್ ಕಲಿಪುವರು ಪೇಳೈ. ||ನಿ||

ಬಾಳಿದ್ದು ಪರಮ ಶಾಂತಿಯಿನಿತಿಲ್ಲ.
ನಿನ್ನ ಸೇವೆಯ ಆಸೆ ಇರುತಿದ್ದು
ಏಂಗೈಯೆ ಅರಿಯದಾನು ಬಳಲಿಹೆ
ಒಡಲು ದುಃಖದ ಕಡಲು, ಮನವು ಬರಿ ಬೇವು.
ನೀಂ ದಯೆದೋರು ದೇವಾಧಿದೇವ ! ||ನಿ||

— ೦ —

## ಲೋಕದೊಳ್ ....

ಲೋಕದೊಳ್ ದೀನೆಯಾಗಿ ಗತಿ ತಪ್ಪಿ
ಬೇಡುತಿಹೆ ಮುಂಗಾಣದೆ ಕಂಗೆಟ್ಟು
ಪಾಹಿಮಾಂ ಪರಿ ಪಾಹಿಮಾಂ.

ಸೊಗವಿನಿತು ಕಾಣೆನೀ ಭವಧಿಯಲಿ
ನಿನ್ನ ಪದಾಬ್ಜವ ನೆನೆದು ಧ್ಯಾನಿಸಿ
ನಲಿಸುವ ಪರಿಯನರಿಯದಾದೆನು
ಪಾಹಿಮಾಂ ಪರಿ ಪಾಹಿಮಾಂ. ||ಲೋ||

ಹಲಹಲವು ಕುಕರ್ಮಗಳ ಹೊಲಸಿನ
ಹೇಸು ಜೀವನವು ಸಾಕೆನಗೆ. ನಿನ್ನ
ದಿವ್ಯ ಒಲುಮೆಯಿೀಯಲೆನಗೆ ಮುಕುತಿಯ
ಪಾಹಿಮಾಂ ಪರಿ ಪಾಹಿಮಾಂ. ||ಲೋ||

— ० —

# ನಿನ್ನ ಕಾಲೊತ್ತಿ....

ನಿನ್ನ ಕಾಲೊತ್ತಿ ವರ ಸೇವೆಗೈವೆ
ನಿತ್ಯ ನಿರಂತರ ಕಾಯೆನ್ನ ಪ್ರಭುವೇ.
ದೀನ ಶರಣ ಪಾಲಕನೆಂಬ ತವ
ಬಿರುದು ಸದಾ ನೆನವಿರಲಿ ತಂದೆಯೆ !

ಶಿಷ್ಯರನು ಪರಿಪಾಲಿಸುವ ನಿತ್ಯದ
ಕ್ರಮವನು ನೀನರಿತು ಸಲಹಯ್ಯ.
ದೀನ ದರಿದ್ರರಿಗೆ ಅಸನ ವಸನವ
ಕರುಣಿಸುವ ಕರುಣಾಸಿಂಧು ಸಲಹಯ್ಯ. ||ನಿ||

ಘನತರ ನಡೆನುಡಿಗಳ ನಾನರಿಯೆ
ಸರಿತನವ ನೀಕಲಿಸೆನಗೆ ಪ್ರಭುವೇ.
ಜನುವು ಜನುಮದ ಕರ್ಮವಿದು ಎನ್ನ
ಬೆಂಬಿಡದು ಸಲಹಯ್ಯ ಶ್ರೀ ಪುರುಷ. ||ನಿ||

ಧರ್ಮ ಧ್ಯೇಯ ಧೋರಣೆ ಎನಗಿಲ್ಲ
ಯೋಚಿಸಿ ತಲೆಯೆ ಬರಡಾಯ್ತು.
ಮತಿಗೆಟ್ಟು ನರಳುವ ತೃಣವು ನಾನು
ಇನ್ನು ನೀನೇ ಗತಿಯಲ್ಲದಾರೆನಗೆ? ||ನಿ||

ಲೋಕಪಾವನ ನೀನು ನೀತಿಯರಿಯದ
ಪರಮ ಪಾಪಿಯು ನಾನು ಸಲಹೆನ್ನ ಶ್ರೀಪುರುಷ ! ||ನಿ||

— o —

## ತ್ರಿಲೋಕ....

ತ್ರೀಲೋಕ ಮಾನ್ಯನು ನೀನು ಮತಿಗತಿ
ತಪ್ಪಿದ ಹೀನಾತಿಹೀನೆಯು ನಾನು
ಈ ಲೋಕದೊಳ್ ನೀನಲ್ಲದಾರುಗತಿ
ಪಾಹಿಮಾಂ ಪರಿ ಪಾಹಿಮಾಂ.

ಸತ್ಯವೇದದ ಆಳವ ನಾನರಿಯೆ
ಆತ್ಮವೇದದೆತ್ತರವ ನಾನರಿಯೆ
ನಿನ್ನ ಪ್ರಕೃತಿ ತೇಜವ ನಾನರಿಯೆ
ಪಾಹಿಮಾಂ ಪರಿ ಪಾಹಿಮಾಂ.

ಧರ್ಮಕರ್ಮದ ಸಾರವ ನಾನರಿಯೆ
ಇಹಪರಗಳ ಜ್ಞಾನವನು ನಾನರಿಯೆ
ನಿನ್ನ ಬಿರುದು ಬಾವಲಿಗಳ ನಾನರಿಯೆ
ಪಾಹಿಮಾಂ ಪರಿ ಪಾಹಿಮಾಂ.

— ಮಂಗಳಂ —

# ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

೧) ಜೀವನಗಂಗಾ
೨) ಡಾ|| ಅಘೋರ
೩) ಡಾ|| ಕಮಲೇಶ್
೪) ವಂದೇ ಮಾತರಂ
೫) ಅನಂತಾನಂತದೆಡೆಗೆ
೬) ಮನೋನ್ಮಣಿ
೭) ಸಂತ್ರಾಸಿನಿ
೮) ಆಸೆಯ ಸುಳಿಯಲ್ಲಿ

(ಕಥಾ ಸಂಕಲನ)

೯) ಬಹುರತ್ನಾವಸುಂಧರಾ
೧೦) ರತ್ನಗರ್ಭಾವಸುಂಧರಾ
೧೧) ಸುಧಾಮಣಿ
೧೨) ರಮಣೀಮಣಿ
೧೩) ಲಿಯೋನಾ
೧೪) ಶ್ರೀಮುಖಿ
೧೫) ಶ್ರೀಹರ್ಷಲಾ
೧೬) ವೈಶಾಖೀ ಪರ್ವ
೧೭) ಫಾಲ್ಗುಣೀ ಪರ್ವ
೧೮) ಮಣಿಮೇಖಲಾ
೧೯) ಮಣಿಕರ್ಣಿಕಾ

(ಕವಿತಾ ಸಂಕಲನ)

೨೦) ಪೂಜಾವಸಾನ ಸಮಯೇ....!
೨೧) ಧ್ಯಾನಾವಸಾನ ಸಮಯೇ....!
೨೨) ಗಗನ ಕುಸುಮ
೨೩) ಜೀವನ ಕುಸುಮ
೨೪) ಚಂಪಕ ರಾಜಿ
೨೫) ಬಕುಳ ರಾಜಿ
೨೬) ಕಸ್ತೂರಿ ಮಾಲಿಕಾ
೨೭) ಮಂದಾರ ಮಾಲಿಕಾ

# ಮಲ್ಲಿಕಾ ಕೃತಿಗಳು

(ಕವಿತಾ ಸಂಕಲನ)

೨೮) ವಿಜಯ ಗಾಥಾ
೨೯) ಗಾನ ತೀರ್ಥ
೩೦) ನಾದ ಬಿಂದು
೩೧) ಕಾವ್ಯಾನಂದ ನಂದಿನಿ
೩೨) ಭಾವಾನಂದ ನಂದಿನಿ
೩೩) ಸಂಗೀತ ಪುಷ್ಪಾಂಜಲಿ
೩೪) ಆತ್ಮ ಗೀತಾಂಜಲಿ

(ಸಂಜೀವನ ಕಾವ್ಯ)

೩೫) ಮಂಗಳ ಭಾರತಿ
೩೬) ಕಲ್ಯಾಣ ಭಾರತಿ
೩೭) ಉತ್ತರೋತ್ತರಣಿ
೩೮) ರಾಗಾನುರಾಗಿಣಿ
೩೯) ಪ್ರಫುಲ್ಲ ಭಾರತ

(ಪೌರಾಣಿಕ ನಾಟಕ)

೪೦) ಪುಣ್ಯಪಯೋನಿಧಿ
೪೧) ಪುಣ್ಯಾಭಿಸಾರ

(ಸಾನೆಟ್‌ಗಳು)

೪೨) ತರಂಗಿಣಿ

(ಗದ್ಯ ಕಾವ್ಯ)

೪೩) ಐಂದ್ರ ಕೀರ್ತಿ ಕೇತನಂ

(ಉಪನಿಷತ್ಕಥಾ)

೪೪) ಕೃತಂ ಸ್ಮರ ಕ್ರತುಂ ಸ್ಮರ

(ಶಿಶು ಸಾಹಿತ್ಯ)

೪೫) ದೂರ ದೇಶದಲ್ಲಿ
೪೬) ಬೆಳದಿಂಗಳ ರಾತ್ರಿ
೪೭) ರಂಗನ ಸಾಹಸ
೪೮) ಓಹಿಯೋಜ ಸರೋವರ
೪೯) ಕೌಶಿಕನ ಗೊಂಬೆ
೫೦) ವಿಶೇಷ ಸುದ್ದಿ
೫೧) ಕಲ್ಯಾಣಿ ರಾಗಿಣಿ

---

ಲಕ್ಷ್ಮೀ ಪ್ರಕಾಶನ
170, ಲ್ಯಾಂಗ್ ಫೋರ್ಡ್ ರೋಡ್, ಬೆಂಗಳೂರು–560 025